KA / BG-GPO / 2515 / WPP-47 / 2009-2011



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು



| ಸಂಪುಟ ೧೪೪ | ಬೆಂಗಳೂರು, ಗುರುವಾರ, ಮೇ ೨೮, ೨೦೦೯ (ಜ್ಯೇಷ್ಠ ೭, ಶಕ ವರ್ಷ ೧೯೩೧) | ಸಂಚಿಕೆ ೨೨ |
|---|---|---|



## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

### ಟೆಂಡರ್ ಅಧಿಸೂಚನೆ

**ಸಂಖ್ಯೆ: ಸಿಆಸುಇ 111 ಡಿಇವಿ 2009, ಬೆಂಗಳೂರು, ದಿನಾಂಕ: 4ನೇ ಮೇ 2009**

1) ಕರ್ನಾಟಕ ಸರ್ಕಾರ ಸಚಿವಾಲಯದ ಬಹು ಮಹಡಿ ಕಟ್ಟಡ ಸಂಕೀರ್ಣದ ಆವರಣದಲ್ಲಿ ಸ್ಕೂಟರ್ ಮತ್ತು ಕಾರ್ ಸ್ಟ್ಯಾಂಡನ್ನು ಗುತ್ತಿಗೆ ಆಧಾರದ ಮೇಲೆ ನಡೆಸಲು ಅನುಭವಸ್ಥ ಗುತ್ತಿಗೆದಾರರಿಂದ ಮೊಹರು ಮಾಡಲ್ಪಟ್ಟ ಟೆಂಡರುಗಳನ್ನು ಕರೆಯಲಾಗಿದೆ.

2) ಟೆಂಡರ್ ಕವರಿನ ಮೇಲೆ "ಕರ್ನಾಟಕ ಸರ್ಕಾರ ಸಚಿವಾಲಯದ ಬಹುಮಹಡಿ ಕಟ್ಟಡದ ಸ್ಕೂಟರ್ ಹಾಗೂ ಕಾರ್ ಸ್ಟ್ಯಾಂಡಿನ ಗುತ್ತಿಗೆ ಬಗ್ಗೆ" ಎಂದು ಬರೆದಿರತಕ್ಕದ್ದು ಹಾಗೂ ರೂ.10,000–00 ಇ.ಎಂ.ಡಿ. ಮೊತ್ತಕ್ಕೆ ಡಿಮ್ಯಾಂಡ್ ಡ್ರಾಫ್ಟ್‌ನ್ನು "ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಲೆಕ್ಕಪತ್ರ)", ಇವರ ಹೆಸರಿಗೆ ಬರೆದು, "ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಕಾರ್ಯಕಾರಿ), ಕೊಠಡಿ ಸಂಖ್ಯೆ: 23, ವಿಧಾನಸೌಧ, ಬೆಂಗಳೂರು" ಇವರಿಗೆ ಸಂಬೋಧಿಸಿ ಕಳುಹಿಸತಕ್ಕದ್ದು. ಡಿಮ್ಯಾಂಡ್ ಡ್ರಾಫ್ಟ್‌ನ್ನು ಲಗತ್ತಿಸಿರದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

3) ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ: 04.06.2009ರ ಮಧ್ಯಾಹ್ನ 3.00 ಗಂಟೆಯವರೆಗೆ

4) ಟೆಂಡರ್‌ನ್ನು ದಿನಾಂಕ: 05.06.2009 ರ ಮಧ್ಯಾಹ್ನ 3.30 ಗಂಟೆಗೆ ಸರ್ಕಾರದ ಉಪ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ)ರವರ ಕೊಠಡಿ ಸಂಖ್ಯೆ: 23ರಲ್ಲಿ ತೆರೆಯಲಾಗುವುದು. ಟೆಂಡರ್ ತೆರೆಯುವ ದಿನಾಂಕವು ಯಾವುದಾದರೂ ಸಾರ್ವತ್ರಿಕ ರಜಾ ದಿನವಾಗಿದ್ದಲ್ಲಿ ನಂತರದ ಕೆಲಸದ ದಿನದಂದು ಅದೇ ವೇಳೆ ಹಾಗೂ ಅದೇ ಸ್ಥಳದಲ್ಲಿ ಟೆಂಡರ್‌ನ್ನು ತೆರೆಯಲಾಗುವುದು.

5) ಟೆಂಡರ್ ಸಲ್ಲಿಸುವವರು ಒಂದು ವರ್ಷದ ಗುತ್ತಿಗೆ ಹಣವನ್ನು ನಮೂದಿಸತಕ್ಕದ್ದು ಮತ್ತು ಈ ಮೊತ್ತವು ರೂ.1,00,000/–ಕ್ಕಿಂತ (ರೂಪಾಯಿ ಒಂದು ಲಕ್ಷ ಮಾತ್ರ) ಕಡಿಮೆ ಇರಕೂಡದು.

6) ಯಶಸ್ವಿ ಟೆಂಡರ್‌ದಾರರು ಸೂಚಿಸಲಾಗುವ ಒಂದು ವರ್ಷದ ಟೆಂಡರ್ ಹಣವನ್ನು ಒಂದೇ ಕಂತಿನಲ್ಲಿ ಸರ್ಕಾರಕ್ಕೆ ಪಾವತಿ ಮಾಡತಕ್ಕದ್ದು. ಟೆಂಡರ್ ಹಣವನ್ನು ಆಯವ್ಯಯ ಲೆಕ್ಕ ಶೀರ್ಷಿಕೆ "0070–ಇತರ ಆಡಳಿತಾತ್ಮಕ ಸೇವೆಗಳು–ಸಿ–60–ಇತರ ಸೇವೆಗಳು–800–ಇತರೆ ಸ್ವೀಕೃತಿಗಳು–03–ಸಾಮಾನ್ಯ ಆಡಳಿತ ಸ್ವೀಕೃತಿಗಳು" ಗೆ ಪಾವತಿ ಮಾಡತಕ್ಕದ್ದು.

7) ಯಶಸ್ವಿ ಟೆಂಡರ್‌ದಾರರು ಪಾವತಿ ಮಾಡಿರುವ ಇ.ಎಂ.ಡಿ. ಮೊತ್ತವನ್ನು ಗುತ್ತಿಗೆ ಷರತ್ತುಗಳನ್ನು ನಿಭಾಯಿಸುವ ಸಲುವಾಗಿ ಸೆಕ್ಯೂರಿಟಿ ಡಿಪಾಸಿಟ್ ಆಗಿ ಪರಿಗಣಿಸಲಾಗುವುದು. ಅಯಶಸ್ವಿ ಟೆಂಡರ್‌ದಾರರ ಮುಂಗಡ ಹಣ ಮೊತ್ತವನ್ನು ಅವರು ಕೋರಿಕೆ ಸಲ್ಲಿಸಿದ ನಂತರ ಮರು ಪಾವತಿ ಮಾಡಲಾಗುವುದು.

8) ಯಾವುದಾದರೊಂದು ಅಥವಾ ಎಲ್ಲಾ ಟೆಂಡರ್‌ಗಳನ್ನು ಕಾರಣ ನೀಡದೇ ತಿರಸ್ಕರಿಸಲು ಅಥವಾ ಒಪ್ಪಿಕೊಳ್ಳಲು ಸರ್ಕಾರವು ಪೂರ್ಣ ಹಕ್ಕನ್ನು ಹೊಂದಿರುತ್ತದೆ.

9) ಈ ಗುತ್ತಿಗೆಯು ಈ ಕೆಳಗೆ ಕಾಣಿಸಿರುವ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟಿರುತ್ತದೆ:–

1) ಈ ಗುತ್ತಿಗೆಯು ದಿನಾಂಕ: 1.7.2009 ರಿಂದ 30.06.2010ರ ಒಂದು ವರ್ಷದ ಅವಧಿಗೆ ಇರುತ್ತದೆ.

2) ಗುತ್ತಿಗೆದಾರರು, ಸ್ಕೂಟರ್ ಮತ್ತು ಕಾರ್ ಸ್ಟ್ಯಾಂಡ್‌ನ್ನು ಬೆಳಿಗ್ಗೆ 8–00 ಗಂಟೆಯಿಂದ ರಾತ್ರಿ 8–00 ಗಂಟೆಯವರೆಗೆ ಕಚೇರಿಯ ಕರ್ತವ್ಯದ ದಿನಗಳಲ್ಲಿ ನಡೆಸತಕ್ಕದ್ದು. ಮತ್ತು ಸ್ಕೂಟರ್ ಮತ್ತು ಕಾರ್ ಸ್ಟ್ಯಾಂಡ್‌ನ ಆವರಣವನ್ನು ಗುತ್ತಿಗೆದಾರರು ಸ್ವಚ್ಛವಾಗಿ ಇಡತಕ್ಕದ್ದು.

3) ಸರ್ಕಾರಿ ನೌಕರರಿಂದ ಸೈಕಲ್ ಒಂದಕ್ಕೆ ತಿಂಗಳೊಂದಕ್ಕೆ ರೂ.5–00 ಹಾಗೂ ಮೋಟಾರ್ ಸೈಕಲ್, ಸ್ಕೂಟರ್, ಮೊಪೆಡ್‌ಗಳಿಗೆ ತಿಂಗಳೊಂದಕ್ಕೆ ರೂ.10–00 ರಂತೆ ಮತ್ತು ಕಾರುಗಳಿಗೆ ತಿಂಗಳೊಂದಕ್ಕೆ ರೂ. 25–00ರಂತೆ ಶುಲ್ಕವನ್ನು ಗುತ್ತಿಗೆದಾರರು ವಸೂಲಿ ಮಾಡುವುದು. ಇತರರಿಂದ ಒಂದು ದಿನಕ್ಕೆ ಸೈಕಲ್‌ಗೆ ರೂ.1–00 ರಂತೆ ಮೋಟಾರ್ ಸೈಕಲ್, ಸ್ಕೂಟರ್, ಮೊಪೆಡ್‌ಗಳಿಗೆ ರೂ.3–00 ರಂತೆ ಮತ್ತು ಕಾರುಗಳಿಗೆ ರೂ.5–00 ರಂತೆ ಶುಲ್ಕವನ್ನು ವಸೂಲಿ ಮಾಡತಕ್ಕದ್ದು.

4) ಈ ನಿಲ್ದಾಣದಲ್ಲಿ ನಿಲ್ಲಿಸುವ ವಾಹನಗಳಿಗೆ ಗುತ್ತಿಗೆದಾರರು ಟೋಕನ್‌ಗಳನ್ನು ನೀಡತಕ್ಕದ್ದು.

5) ಈ ನಿಲ್ದಾಣದಲ್ಲಿ ನಿಲ್ಲಿಸುವ ವಾಹನಗಳಿಗೆ ಮೇಲ್ಕಾಣಿಸಿದಂತೆ ನಿಗದಿತ ಶುಲ್ಕವನ್ನು ಮಾತ್ರ ವಸೂಲಿ ಮಾಡತಕ್ಕದ್ದು.

6) ಸರ್ಕಾರಿ ಕಛೇರಿಗಳ ಸೈಕಲ್ : ಸ್ಕೂಟರ್ : ಕಾರು ಚಾಲಕರುಗಳಿಂದ ಗುತ್ತಿಗೆದಾರರು ಶುಲ್ಕವನ್ನು ವಸೂಲಿ ಮಾಡಕೂಡದು.

7) ಈ ನಿಲ್ದಾಣಗಳಲ್ಲಿ ನಿಗದಿತ ವೇಳೆಯಲ್ಲಿ ನಿಲ್ಲಿಸಿರುವ ವಾಹನಗಳ ಭದ್ರತೆಯ ಪೂರ್ಣ ಜವಾಬ್ದಾರಿ ಗುತ್ತಿಗೆದಾರರದ್ದಾಗಿರುತ್ತದೆ. ಈ ಸ್ಟ್ಯಾಂಡಿನಲ್ಲಿ ವಾಹನಗಳನ್ನು ನಿಲ್ಲಿಸಿದ ಅವಧಿಯಲ್ಲಿ ವಾಹನಗಳಿಗೆ ಯಾವುದೇ ನಷ್ಟ ಅಥವಾ ಹಾನಿ ಉಂಟಾದಲ್ಲಿ ಗುತ್ತಿಗೆದಾರರು ಇದಕ್ಕೆ ಪರಿಹಾರವನ್ನು ನೀಡಲು ಜವಾಬ್ದಾರರಾಗಿರುತ್ತಾರೆ.

8) ಈ ನಿಲ್ದಾಣದಲ್ಲಿ ನಿಗದಿತ ವೇಳೆಯಲ್ಲಿ ನಿಲ್ಲಿಸಿರುವ ಯಾವುದೇ ವಾಹನವು ಕಾಣೆಯಾದಲ್ಲಿ ಅಥವಾ ಅದಕ್ಕೆ ಹಾನಿಯಾದಲ್ಲಿ ಇದು ಗುತ್ತಿಗೆದಾರರ ನಿರ್ಲಕ್ಷ್ಯತನ ಅಥವಾ ಉಪೇಕ್ಷೆ ಎಂದು ಪರಿಗಣಿಸಿದರೆ ಇದಕ್ಕೆ ಗುತ್ತಿಗೆದಾರರೇ ವಾಹನದ ಮಾಲೀಕರಿಗೆ ಪರಿಹಾರ ಕೊಡುವ ವಿಷಯದಲ್ಲಿ ಸರ್ಕಾರದ ಮುಖ್ಯ ಕಾರ್ಯದರ್ಶಿಗಳು ಕೊಡುವ ನಿರ್ಣಯವು ಅಂತಿಮವಾಗಿರುತ್ತದೆ. ಗುತ್ತಿಗೆ ಅವಧಿ ಮುಗಿದ ಮೇಲೆ ಗುತ್ತಿಗೆದಾರರಿಂದ ಸರ್ಕಾರಕ್ಕಾಗಲೀ ಅಥವಾ ವಾಹನದ ಮಾಲೀಕರಿಗಾಗಲೀ ಯಾವುದೇ ಬಾಕಿ ಇದ್ದಲ್ಲಿ ಅದನ್ನು ಮುಂಗಡ ಹಣದಿಂದ ಕಳೆದು ಬಾಕಿ ಹಣವನ್ನು ಗುತ್ತಿಗೆದಾರರಿಗೆ ಹಿಂತಿರುಗಿಸಲಾಗುವುದು.

9) ಗುತ್ತಿಗೆಯನ್ನು ವಹಿಸಿದ ದಿನಾಂಕದಿಂದ 15 ದಿವಸದೊಳಗೆ ಗುತ್ತಿಗೆದಾರರು ನಿಗದಿತ ಪ್ರಪತ್ರದಲ್ಲಿ ಕರಾರನ್ನು ಸಹಿ ಮಾಡಿ ಕೊಡತಕ್ಕದ್ದು.

10) ಗುತ್ತಿಗೆಯ ಷರತ್ತು ಮತ್ತು ನಿಬಂಧನೆಗಳ ಉಲ್ಲಂಘನೆಯಾದಲ್ಲಿ ಗುತ್ತಿಗೆಯನ್ನು ರದ್ದುಪಡಿಸಲಾಗುವುದು. ಅಂತಹ ಸಂದರ್ಭದಲ್ಲಿ ಭದ್ರತಾ ಠೇವಣಿಯಾಗಿ ಇಟ್ಟಿರುವ ಮುಂಗಡ ಹಣವನ್ನು ಹಾಗೂ ಮುಂಗಡವಾಗಿ ಪಾವತಿ ಮಾಡಿರುವ ಗುತ್ತಿಗೆ ಶುಲ್ಕವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

11) ಗುತ್ತಿಗೆದಾರರು, ಗುತ್ತಿಗೆ ನಡೆಸುವ/ಪಡೆಯುವ ಸ್ಥಳಗಳಲ್ಲಿ ಸರ್ಕಾರಿ ಸಿಬ್ಬಂದಿ ಮತ್ತು ಸಾರ್ವಜನಿಕರಿಗೆ ನಿಗದಿಪಡಿಸಿರುವ ಶುಲ್ಕವನ್ನು ಬೋರ್ಡ್‌ನಲ್ಲಿ ಬರೆದು ಕಡ್ಡಾಯವಾಗಿ ಪ್ರದರ್ಶಿಸತಕ್ಕದ್ದು.

12) ಈ ಸಂಬಂಧ ಯಾವುದೇ ವ್ಯಾಜ್ಯ ಉಂಟಾದಲ್ಲಿ ಅದನ್ನು ಬೆಂಗಳೂರು ನಗರ ಸಿವಿಲ್ ನ್ಯಾಯಾಲಯದಲ್ಲಿ ಮಾತ್ರ ಬಗೆಹರಿಸಿಕೊಳ್ಳತಕ್ಕದ್ದು.

10) ಗುತ್ತಿಗೆಯ ಷರತ್ತು ಮತ್ತು ನಿಬಂಧನೆಗಳನ್ನು ಉಲ್ಲಂಘಿಸುವುದನ್ನು ಹೊರತುಪಡಿಸಿ ಬೇರೆ ಯಾವುದೇ ಕಾರಣಗಳಿಗಾಗಿ ಯಾವುದೇ ಸಮಯದಲ್ಲಿ, ಗುತ್ತಿಗೆದಾರರಿಗೆ 2 ತಿಂಗಳ ಸೂಚನಾ ಪತ್ರ ನೀಡಿ ಗುತ್ತಿಗೆಯನ್ನು ರದ್ದುಪಡಿಸಲು ಸರ್ಕಾರಕ್ಕೆ ಹಕ್ಕಿರುತ್ತದೆ. ಈ ಉಪ ವಾಕ್ಯದಂತೆ ಗುತ್ತಿಗೆಯನ್ನು ರದ್ದುಪಡಿಸಿದಲ್ಲಿ ಉಳಿದ ಗುತ್ತಿಗೆ ಅವಧಿಗೆ ಸಮ ಪ್ರಮಾಣದ ಗುತ್ತಿಗೆ ಶುಲ್ಕವನ್ನು ಗುತ್ತಿಗೆದಾರರಿಗೆ ಹಿಂದಿರುಗಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಮಂಜುನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ)

ಪಿ.ಆರ್. 341

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಪ್ರಾದೇಶಿಕ ಅರಣ್ಯ ವಿಭಾಗ, ತುಮಕೂರು,

## ಅರಣ್ಯ ಕಾಮಗಾರಿಗಳ ಟೆಂಡರ್ ಸಂಖ್ಯೆ: ಎ.ಅಕಾ/ಟೆಂಡರ್/ವಿವ.1/2009–10, ದಿನಾಂಕ: 6ನೇ ಮೇ 2009

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ 2009–10ನೇ ಸಾಲಿನಲ್ಲಿ ತುಮಕೂರು ಪ್ರಾದೇಶಿಕ ಅರಣ್ಯ ವಿಭಾಗದ ವ್ಯಾಪ್ತಿಗೆ ಒಳಪಡುವ ವಲಯಗಳಲ್ಲಿನ ಈ ಕೆಳಕಂಡ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ಈ ವಿಭಾಗದಲ್ಲಿ 2009–10ನೇ ಸಾಲಿಗೆ ನೊಂದಾಯಿಸಿದ ಅರಣ್ಯ ಗುತ್ತಿಗೆದಾರರಿಂದ ಪ್ರತಿಯೊಂದು ಕಾಮಗಾರಿಗೆ ಪ್ರತ್ಯೇಕವಾಗಿ ವಲಯವಾರು ಮೊಹರಾದ ಪ್ರತಿ ಕಾಮಗಾರಿಗೆ ಶೇಕಡವಾರು ಟೆಂಡರ್ ಕರೆಯಲಾಗಿದೆ. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ದಿನಾಂಕ 15–06–2009 ರಂದು 3.00 ಗಂಟೆಯವರೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ತುಮಕೂರು ವಿಭಾಗ, ತುಮಕೂರು ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಗಳು ಸ್ವೀಕರಿಸುವರು, ದಿನಾಂಕ 15–06–2009 ರಂದು ಯಾವ ಕಾಮಗಾರಿಗೂ ಟೆಂಡರ್‌ಗಳು ಬಾರದೇ ಇದ್ದಲ್ಲಿ ಮತ್ತೆ ಎರಡನೇ ಬಾರಿಗೆ ದಿನಾಂಕ 22–06–2009ರಂದು 3.00 ಗಂಟೆಗೆ ಸ್ವೀಕರಿಸಲಾಗುವುದು. ಮತ್ತೆ ಪ್ರತ್ಯೇಕವಾಗಿ ಪ್ರಕಟಣೆ ನೀಡಲಾಗುವುದಿಲ್ಲ.

**ಷೆಡ್ಯೂಲ್**

| ಕ್ರ ಸಂ | ಟೆಂಡರ್ ಹೊರಡಿಸಿದ ಪ್ರಾಧಿಕಾರ | ಟೆಂಡರ್ ಕ್ರಮಾಂಕ ಹಾಗೂ ದಿನಾಂಕ | ವಲಯ | ಯೋಜನೆ | ಕಾಮಗಾರಿ ವಿವರ | | ಸ್ಥಳ | ಮಾದರಿ | ಭೌತಿಕ ಪರಿಮಾಣ (ಹೆ./ಕಿಮೀ. ಗಳಲ್ಲಿ) | ಅಂದಾಜು ಮೊತ್ತ | ನಿಗದಿಪಡಿಸಿದ ಇಎಂಡಿ ಮೊತ್ತ. |
|---|---|---|---|---|---|---|---|---|---|---|---|
| 1 | 2 | 3 | 4 | 5 | 6 | | 7 | 8 | 9 | 10 | 11 |
| 1 | ಉಪ ಅರಣ್ಯ ಸಂರಕ್ಷಣಾಧಿಕಾರಿ, ಪ್ರಾದೇಶಿಕ ವಿಭಾಗ, ತುಮಕೂರು. | ಎ.ಅಕಾ/ ಟೆಂಡರ್/ ವಿವ.1/ 2009–10, ದಿನಾಂಕ 06–05–2009. | ಕುಣಿಗಲ್ | KSFMBC | 1 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ಕಂಪ್ಲಾಪುರ ಮೀಸಲು ಅರಣ್ಯ | 02 | 50 | 164000 | 4100 |
| 2 | –"– | –"– | ತುಮಕೂರು | –"– | 2 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ದೇವರಾಯನ ದುರ್ಗ ಮೀಸಲು ಅರಣ್ಯ | 02 | 50 | 164000 | 4100 |
| 3 | –"– | –"– | ಗುಬ್ಬಿ | –"– | 3 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ಹರಗಲ ದೇವಿಗುಡ್ಡ ಎಸ್.ಎಫ್. | 02 | 50 | 164000 | 4100 |

| 1 | 2 | 3 | 4 | 5 | 6 | | 7 | 8 | 9 | 10 | 11 |
|---|---|---|---|---|---|---|---|---|---|---|---|
| 4 | ಉಪ ಅರಣ್ಯ ಸಂರಕ್ಷಣಾಧಿಕಾರಿ, ಪ್ರಾದೇಶಿಕ ವಿಭಾಗ, ತುಮಕೂರು. | ಎ.ಅಕಾ/ ಟೆಂಡರ್/ ವಿವ.1/ 2009–10, ದಿನಾಂಕ 06–05–2009. | ಗುಬ್ಬಿ | KSFMBC | 4 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ಬೆಣ್ಣೆಹಳ್ಳ ಕಾವಲ್ ಎಸ್.ಎಫ್. | 02 | 50 | 164000 | 4100 |
| 5 | –"– | –"– | ಮಧುಗಿರಿ | –"– | 5 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ಜಾನಕಲ್ ಎಸ್.ಎಫ್ ಮರಬಳ್ಳಿ ಪ್ರದೇಶ | 02 | 50 | 164000 | 4100 |
| 6 | –"– | –"– | ಮಧುಗಿರಿ | –"– | 6 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ಬ್ಯಾಲ್ಯ ಎಸ್.ಎಫ್ | 02 | 50 | 164000 | 4100 |
| 7 | –"– | –"– | ಮಧುಗಿರಿ | –"– | 7 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ಜಾನಕಲ್ ಎಸ್ ಎಫ್ | 02 | 50 | 164000 | 4100 |
| 8 | –"– | –"– | ಪಾವಗಡ | –"– | 8 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ತಿಪ್ಪಗಾನಹಳ್ಳಿ ಎಸ್.ಎಫ್ | 02 | 50 | 164000 | 4100 |
| 9 | –"– | –"– | ಪಾವಗಡ | –"– | 9 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ನಿಡಗಲ್ ಎಸ್.ಎಫ್ | 02 | 50 | 164000 | 4100 |
| 10 | –"– | –"– | ಬುಕ್ಕಾಪಟ್ಟಣ | –"– | 10 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ಬುಕ್ಕಾಪಟ್ಟಣ ಎಸ್.ಎಫ್. ಹರಳಿಕಟ್ಟೆ ಅರಣ್ಯ ಪ್ರದೇಶ | 02 | 50 | 164000 | 4100 |
| 11 | –"– | –"– | ಬುಕ್ಕಾಪಟ್ಟಣ | –"– | 11 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ಬುಕ್ಕಾಪಟ್ಟಣ ಎಸ್.ಎಫ್. ಪುರ ಪ್ರದೇಶ | 02 | 50 | 164000 | 4100 |

| 1 | 2 | 3 | 4 | 5 | 6 | | 7 | 8 | 9 | 10 | 11 |
|---|---|---|---|---|---|---|---|---|---|---|---|
| 12 | ಉಪ ಅರಣ್ಯ ಸಂರಕ್ಷಣಾಧಿಕಾರಿ, ಪ್ರಾದೇಶಿಕ ವಿಭಾಗ, ತುಮಕೂರು. | ಎ.ಅಕಾ/ ಟೆಂಡರ್/ ವಿವ.1/ 2009–10, ದಿನಾಂಕ 06–05–2009. | ತಿಪಟೂರು | KSFMBC | 12 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ಹಾಲ್ಕುರಿಕೆ | 04 | 25 | 195000 | 4900 |
| 13 | –"– | –"– | ತಿಪಟೂರು | –"– | 13 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ಹಾಲ್ಕುರಿಕೆ ಮೀ.ಅ. ಬಸವರಾಜಪುರ ಪ್ರದೇಶ | 04 | 25 | 195000 | 4900 |
| 14 | –"– | –"– | ಬುಕ್ಕಾಪಟ್ಟಣ | –"– | 14 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ಬುಕ್ಕಾಪಟ್ಟಣ ಎಸ್.ಎಫ್. (ಹೊಸಹಳ್ಳಿ ಪ್ರದೇಶ) | 04 | 25 | 195000 | 4900 |
| 15 | –"– | –"– | ಬುಕ್ಕಾಪಟ್ಟಣ | –"– | 15 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ಬೂದಿಗುಡ್ಡ ಪ್ರದೇಶ ಬುಕ್ಕಾಪಟ್ಟಣ ಅರಣ್ಯ | 04 | 25 | 195000 | 4900 |
| 16 | –"– | –"– | ಬುಕ್ಕಾಪಟ್ಟಣ | –"– | 16 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ಕೆರೆಮಲ್ಲಿ ಪ್ರದೇಶ ಬುಕ್ಕಾಪಟ್ಟಣ ಅರಣ್ಯ | 04 | 25 | 195000 | 4900 |
| 17 | –"– | –"– | ಬುಕ್ಕಾಪಟ್ಟಣ | –"– | 17 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ಬಸವನಬಂದ್ರೆ ಕೆಂಗಲ್ ಪ್ರದೇಶ ಬುಕ್ಕಾಪಟ್ಟಣ ಅರಣ್ಯ | 04 | 25 | 195000 | 4900 |
| 18 | –"– | –"– | ಶಿರಾ | –"– | 18 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ಮುದಿಗೆರೆ ಮೀ.ಅ. | 04 | 25 | 195000 | 4900 |

| 1 | 2 | 3 | 4 | 5 | 6 | | 7 | 8 | 9 | 10 | 11 |
|---|---|---|---|---|---|---|---|---|---|---|---|
| 19 | ಉಪ ಅರಣ್ಯ ಸಂರಕ್ಷಣಾಧಿಕಾರಿ, ಪ್ರಾದೇಶಿಕ ವಿಭಾಗ, ತುಮಕೂರು. | ಎ.ಅಕಾ/ ಟೆಂಡರ್/ ವಿವ.1/ 2009–10, ದಿನಾಂಕ 06–05–2009. | ಶಿರಾ | KSFMBC | 19 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ರಂಗನಾಥಪುರ ಮೀ.ಅ. | 04 | 25 | 195000 | 4900 |
| 20 | –“– | –“– | ಕುಣಿಗಲ್ | –“– | 20 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ಇಪ್ಪಾಡಿ ಮೀ.ಅ. | 04 | 25 | 195000 | 4900 |
| 21 | –“– | –“– | ಗುಬ್ಬಿ | –“– | 21 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ಮಂಚಲದೊರೆ ಮೀ.ಅ. | 04 | 25 | 195000 | 4900 |
| 22 | –“– | –“– | ಪಾವಗಡ | –“– | 22 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ನಿಡಗಲ್ ಮೀ.ಅ. | 04 | 25 | 195000 | 4900 |
| 23 | –“– | –“– | ಗುಬ್ಬಿ | –“– | 23 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ಹರಗಲದೇವಿ ಗುಡ್ಡ ಮೀ.ಅ. | 05 | 25 | 159400 | 4000 |
| 24 | –“– | –“– | ಗುಬ್ಬಿ | –“– | 24 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ಬೆಣ್ಣೆಹಳ್ಳಕಾವಲ್ ಮೀ.ಅ. | 05 | 24 | 159400 | 4000 |
| 25 | –“– | –“– | ಗುಬ್ಬಿ | –“– | 25 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ದೇವರಹಟ್ಟಿ ಬೆಣ್ಣೆಹಳ್ಳಕಾವಲ್ ಮೀ.ಅ. | 05 | 25 | 159400 | 4000 |
| 26 | –“– | –“– | ಕುಣಿಗಲ್ | –“– | 26 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ಉಜ್ಜನಿ (ಹಿತ್ತಲಪುರ) ಮೀ.ಅ. | 05 | 25 | 159400 | 4000 |

| 1 | 2 | 3 | 4 | 5 | 6 | | 7 | 8 | 9 | 10 | 11 |
|---|---|---|---|---|---|---|---|---|---|---|---|
| 27 | ಉಪ ಅರಣ್ಯ ಸಂರಕ್ಷಣಾಧಿಕಾರಿ, ಪ್ರಾದೇಶಿಕ ವಿಭಾಗ, ತುಮಕೂರು. | ಎ.ಅಕಾ/ ಟೆಂಡರ್/ ವಿವ.1/ 2009–10, ದಿನಾಂಕ 06–05–2009. | ಕುಣಿಗಲ್ | KSFMBC | 27 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ಉಜ್ಜನಿ ಮೀ.ಅ. (ನಂಜೇಗೌಡನಹಳ್ಳಿ) | 05 | 24 | 153000 | 3800 |
| 28 | –"– | –"– | ಶಿರಾ | –"– | 28 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ಮುದಿಗೆರೆ ಮೀ.ಅ. | 05 | 25 | 159400 | 4000 |
| 29 | –"– | –"– | ಶಿರಾ | –"– | 29 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ರಂಗಾಪುರ ಮೀ.ಅ. | 05 | 25 | 159400 | 4000 |
| 30 | –"– | –"– | ಪಾವಗಡ | –"– | 30 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ನಿಡಗಲ್ ಎಸ್.ಎಫ್ | 05 | 20 | 127500 | 3200 |
| 31 | –"– | –"– | ತುಮಕೂರು | –"– | 31 | 2009–10ನೇ ಸಾಲಿನಲ್ಲಿ ಮುಂಗಾರು ನೆಡುತೋಪು ಬೆಳೆಸುವುದು (ಜಾನುವಾರು ನಿರೋಧಕ ಕಂದಕ ತೆಗೆಯುವುದು Manually & using JCB ಬೀಜ ಬಿತ್ತುವುದು, ದುರಂತ /ಗ್ಲಿರಿಸಿಡಿಯಾ ಸಸಿ ಸರಬರಾಜು ಹಾಗೂ ನೆಡುವುದು (ಮೌಂಡ್ ಮೇಲೆ) ಬೆಂಕಿ ಸಂರಕ್ಷಣೆ ಕಾಮಗಾರಿಗಳು ತಾಲಿಪೀಟ್ ಮಾಡಿ ಬೀಜ ಬಿತ್ತುವುದು Tending operation ಕಲ್ಲಿನ ನಾಮಫಲಕ ಅಳವಡಿಸುವುದು ಇತ್ಯಾದಿ) | ದೇವರಾಯನ ದುರ್ಗ (ಚಿನಗ) ಪ್ರದೇಶ | 01 | 50 | 315000 | 7900 |

| 1 | 2 | 3 | 4 | 5 | 6 | | 7 | 8 | 9 | 10 | 11 |
|---|---|---|---|---|---|---|---|---|---|---|---|
| 32 | ಉಪ ಅರಣ್ಯ ಸಂರಕ್ಷಣಾಧಿಕಾರಿ, ಪ್ರಾದೇಶಿಕ ವಿಭಾಗ, ತುಮಕೂರು. | ಎ.ಅಕಾ/ ಟೆಂಡರ್/ ವಿವ.1/ 2009–10, ದಿನಾಂಕ 06–05–2009. | ತುಮಕೂರು | KSFMBC | 32 | 2009–10ನೇ ಸಾಲಿನಲ್ಲಿ ಮಣ್ಣು ಸಂರಕ್ಷಣಾ ಕಾಮಗಾರಿಗಳಾದ ನಾಲಾಬಂಡ್ ಅಥವಾ ಪರ್ಕ್ಯೂಲೇಶನ್ ಪಾಂಡ್ ಗಲ್ಲಿಚೆಕ್ಸ್, ಚೆಕ್‌ಡ್ಯಾಂ ಅರ್ಥರನ್ ಬಂಡ್ಸ್ ನಿರ್ಮಾಣ ಮಾಡುವುದು. | ದೇವರಾಯನದುರ್ಗ ಮೀ.ಅ. (ಚಿನಗ ಪ್ರದೇಶ) | 01 | 50 | 77500 | 1900 |
| 33 | –"– | –"– | ತುಮಕೂರು | –"– | 33 | 2009–10ನೇ ಸಾಲಿನಲ್ಲಿ ಮುಂಗಾರು ನೆಡುತೋಪು ಬೆಳೆಸುವುದು (ಜಾನುವಾರು ನಿರೋಧಕ ಕಂದಕ ತೆಗೆಯುವುದು Manually & using JCB ಬೀಜ ಬಿತ್ತುವುದು, ದುರಂತ /ಗ್ಲಿರಿಸಿಡಿಯಾ ಸಸಿ ಸರಬರಾಜು ಹಾಗೂ ನೆಡುವುದು (ಮೌಂಡ್ ಮೇಲೆ) ಬೆಂಕಿ ಸಂರಕ್ಷಣೆ ಕಾಮಗಾರಿಗಳು ತಾಲಿಪೀಟ್ ಮಾಡಿ ಬೀಜ ಬಿತ್ತುವುದು Tending operation ಕಲ್ಲಿನ ನಾಮಫಲಕ ಅಳವಡಿಸುವುದು ಇತ್ಯಾದಿ) | ದೇವರಾಯನದುರ್ಗ ಮೀ.ಅ. (ತಿಮ್ಮನಾಯ್ಕನಹಳ್ಳಿ ಪ್ರದೇಶ) | 01 | 50 | 315000 | 7900 |
| 34 | –"– | –"– | ತುಮಕೂರು | –"– | 34 | 2009–10ನೇ ಸಾಲಿನಲ್ಲಿ ಮಣ್ಣು ಸಂರಕ್ಷಣಾ ಕಾಮಗಾರಿಗಳಾದ ನಾಲಾಬಂಡ್ ಅಥವಾ ಪರ್ಕ್ಯೂಲೇಶನ್ ಪಾಂಡ್ ಗಲ್ಲಿಚೆಕ್ಸ್, ಚೆಕ್‌ಡ್ಯಾಂ ಅರ್ಥರನ್ ಬಂಡ್ಸ್ ನಿರ್ಮಾಣ ಮಾಡುವುದು. | ದೇವರಾಯನದುರ್ಗ ಮೀ.ಅ. (ತಿಮ್ಮನಾಯ್ಕನಹಳ್ಳಿ ಪ್ರದೇಶ) | 01 | 50 | 77500 | 1900 |

| 1 | 2 | 3 | 4 | 5 | 6 | | 7 | 8 | 9 | 10 | 11 |
|---|---|---|---|---|---|---|---|---|---|---|---|
| 35 | ಉಪ ಅರಣ್ಯ ಸಂರಕ್ಷಣಾಧಿಕಾರಿ, ಪ್ರಾದೇಶಿಕ ವಿಭಾಗ, ತುಮಕೂರು. | ಎ.ಅಕಾ/ ಟೆಂಡರ್/ ವಿವ.1/ 2009–10, ದಿನಾಂಕ 06–05–2009. | ತುಮಕೂರು | KSFMBC | 35 | 2009–10ನೇ ಸಾಲಿನಲ್ಲಿ ಮುಂಗಾರು ನೆಡುತೋಪು ಬೆಳೆಸುವುದು (ಜಾನುವಾರು ನಿರೋಧಕ ಕಂದಕ ತೆಗೆಯುವುದು Manually & using JCB ಬೀಜ ಬಿತ್ತುವುದು, ದುರಂತ /ಗ್ಲಿರಿಸಿಡಿಯಾ ಸಸಿ ಸರಬರಾಜು ಹಾಗೂ ನೆಡುವುದು (ಮೌಂಡ್ ಮೇಲೆ) ಬೆಂಕಿ ಸಂರಕ್ಷಣೆ ಕಾಮಗಾರಿಗಳು ತಾಲಿಪೀಟ್ ಮಾಡಿ ಬೀಜ ಬಿತ್ತುವುದು Tending operation ಕಲ್ಲಿನ ನಾಮಫಲಕ ಅಳವಡಿಸುವುದು ಇತ್ಯಾದಿ) | ದೇವರಾಯನದುರ್ಗ ಮೀ.ಅ. (ನಾಗೋಜಿಪಾಳ್ಯ ಪ್ರದೇಶ) | 01 | 50 | 315000 | 7900 |
| 36 | –"– | –"– | ತುಮಕೂರು | –"– | 36 | 2009–10ನೇ ಸಾಲಿನಲ್ಲಿ ಮಣ್ಣು ಸಂರಕ್ಷಣಾ ಕಾಮಗಾರಿಗಳಾದ ನಾಲಾಬಂಡ್ ಅಥವಾ ಪರ್ಕ್ಯೂಲೇಶನ್ ಪಾಂಡ್ ಗಲ್ಲಿಚೆಕ್ಸ್, ಚೆಕ್‌ಡ್ಯಾಂ ಅರ್ಥರನ್ ಬಂಡ್ಸ್ ನಿರ್ಮಾಣ ಮಾಡುವುದು. | ದೇವರಾಯನದುರ್ಗ ಮೀ.ಅ. (ನಾಗೋಜಿಪಾಳ್ಯ ಪ್ರದೇಶ) | 01 | 50 | 77500 | 1900 |
| 37 | –"– | –"– | ಕುಣಿಗಲ್ | –"– | 37 | 2009–10ನೇ ಸಾಲಿನಲ್ಲಿ ಮುಂಗಾರು ನೆಡುತೋಪು ಬೆಳೆಸುವುದು (ಜಾನುವಾರು ನಿರೋಧಕ ಕಂದಕ ತೆಗೆಯುವುದು Manually & using JCB ಬೀಜ ಬಿತ್ತುವುದು, ದುರಂತ /ಗ್ಲಿರಿಸಿಡಿಯಾ ಸಸಿ ಸರಬರಾಜು ಹಾಗೂ ನೆಡುವುದು (ಮೌಂಡ್ ಮೇಲೆ) ಬೆಂಕಿ ಸಂರಕ್ಷಣೆ ಕಾಮಗಾರಿಗಳು ತಾಲಿಪೀಟ್ ಮಾಡಿ ಬೀಜ ಬಿತ್ತುವುದು Tending operation ಕಲ್ಲಿನ ನಾಮಫಲಕ ಅಳವಡಿಸುವುದು ಇತ್ಯಾದಿ) | ಉಜ್ಜನಿ ಮೀ.ಅ. | 01 | 50 | 315000 | 7900 |

| 1 | 2 | 3 | 4 | 5 | 6 | | 7 | 8 | 9 | 10 | 11 |
|---|---|---|---|---|---|---|---|---|---|---|---|
| 38 | ಉಪ ಅರಣ್ಯ ಸಂರಕ್ಷಣಾಧಿಕಾರಿ, ಪ್ರಾದೇಶಿಕ ವಿಭಾಗ, ತುಮಕೂರು. | ಎ.ಅಕಾ/ ಟೆಂಡರ್/ ವಿವ.1/ 2009–10, ದಿನಾಂಕ 06–05–2009. | ಕುಣಿಗಲ್ | KSFMBC | 38 | 2009–10ನೇ ಸಾಲಿನಲ್ಲಿ ಮಣ್ಣು ಸಂರಕ್ಷಣಾ ಕಾಮಗಾರಿಗಳಾದ ನಾಲಾಬಂಡ್ ಅಥವಾ ಪರ್ಕ್ಯೂಲೇಶನ್ ಪಾಂಡ್ ಗಲ್ಲಿಚೆಕ್ಸ್, ಚೆಕ್‌ಡ್ಯಾಂ ಅರ್ಥರನ್ ಬಂಡ್ಸ್ ನಿರ್ಮಾಣ ಮಾಡುವುದು. | ಉಜ್ಜನಿ ಮೀ.ಅ. | 01 | 50 | 77500 | 1900 |
| 39 | –"– | –"– | ಕುಣಿಗಲ್ | –"– | 39 | 2009–10ನೇ ಸಾಲಿನಲ್ಲಿ ಮುಂಗಾರು ನೆಡುತೋಪು ಬೆಳೆಸುವುದು (ಜಾನುವಾರು ನಿರೋಧಕ ಕಂದಕ ತೆಗೆಯುವುದು Manually & using JCB ಬೀಜ ಬಿತ್ತುವುದು, ದುರಂತ /ಗ್ಲಿರಿಸಿಡಿಯಾ ಸಸಿ ಸರಬರಾಜು ಹಾಗೂ ನೆಡುವುದು (ಮೌಂಡ್ ಮೇಲೆ) ಬೆಂಕಿ ಸಂರಕ್ಷಣೆ ಕಾಮಗಾರಿಗಳು ತಾಲಿಪೀಟ್ ಮಾಡಿ ಬೀಜ ಬಿತ್ತುವುದು Tending operation ಕಲ್ಲಿನ ನಾಮಫಲಕ ಅಳವಡಿಸುವುದು ಇತ್ಯಾದಿ) | ಇಡಿಗರಪಾಳ್ಯ ಕಂಪ್ಲಾಪುರ ಮೀ.ಅ. | 01 | 50 | 315000 | 7900 |
| 40 | –"– | –"– | ಕುಣಿಗಲ್ | –"– | 40 | 2009–10ನೇ ಸಾಲಿನಲ್ಲಿ ಮಣ್ಣು ಸಂರಕ್ಷಣಾ ಕಾಮಗಾರಿಗಳಾದ ನಾಲಾಬಂಡ್ ಅಥವಾ ಪರ್ಕ್ಯೂಲೇಶನ್ ಪಾಂಡ್ ಗಲ್ಲಿಚೆಕ್ಸ್, ಚೆಕ್‌ಡ್ಯಾಂ ಅರ್ಥರನ್ ಬಂಡ್ಸ್ ನಿರ್ಮಾಣ ಮಾಡುವುದು. | ಇಡಿಗರಪಾಳ್ಯ ಕಂಪ್ಲಾಪುರ ಮೀ.ಅ. | 01 | 50 | 77500 | 1900 |
| 41 | –"– | –"– | ಪಾವಗಡ | 12th Finance | 41 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ಕೋಟೆಗುಡ್ಡ ಮೀ.ಅ. | 04 | 15 | 170900 | 4300 |
| 42 | –"– | –"– | ಪಾವಗಡ | DDF | 42 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ಕೋಟೆಗುಡ್ಡ ಮೀ.ಅ. | 04 | 25 | 190000 | 4700 |

| 1 | 2 | 3 | 4 | 5 | 6 | | 7 | 8 | 9 | 10 | 11 |
|---|---|---|---|---|---|---|---|---|---|---|---|
| 43 | ಉಪ ಅರಣ್ಯ ಸಂರಕ್ಷಣಾಧಿಕಾರಿ, ಪ್ರಾದೇಶಿಕ ವಿಭಾಗ, ತುಮಕೂರು. | ಎ.ಅಕಾ/ ಟೆಂಡರ್/ ವಿವ.1/ 2009–10, ದಿನಾಂಕ 06–05–2009. | ತುಮಕೂರು | GUA | 43 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ತುಮಕೂರು ನಗರ | ರಸ್ತೆಬದಿ | 9 | 151800 | 3800 |
| 44 | –"– | –"– | ಗುಬ್ಬಿ | KFDF ಯೋಜನೇತರ | 44 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ಮಾರಶೆಟ್ಟಿಹಳ್ಳಿ ಅರಣ್ಯ | 04 | 20 | 227800 | 5700 |
| 45 | –"– | –"– | ಗುಬ್ಬಿ | KFDF ಯೋಜನೇತರ | 45 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ಮಾರಶೆಟ್ಟಿಹಳ್ಳಿ ಕೆಂಚಗಾಲಹಳ್ಳಿ ಪ್ರದೇಶ | 04 | 12 | 136700 | 3400 |
| 46 | –"– | –"– | ಪಾವಗಡ | COP-11 Forest protection | 46 | 2009–10ನೇ ಸಾಲಿನಲ್ಲಿ ನೆಡುತೋಪು ಬೆಳೆಸುವುದು (ಮುಂದುವರಿದ ಕಾಮಗಾರಿ) | ಪಾವಗಡ ಬ್ಲಾಕ್ | 04 | 10 | 113900 | 2900 |

**ನಿಬಂಧನೆಗಳು**

1. ಎ) ಟೆಂಡರ್ ಫಾರಂನ್ನು ಟೆಂಡರ್ ದಿನಾಂಕದಂದು ಅಪರಾಹ್ನ 1.00 ಗಂಟೆಯವರೆಗೆ ರೂ. 200–00 ಮತ್ತು ತೆರಿಗೆ ಪಾವತಿ ಮಾಡಿ ಪಡೆಯಬಹುದಾಗಿದೆ. ಭರ್ತಿ ಮಾಡಿದ ಟೆಂಡರ್ ಫಾರಂನ್ನು ಸಂಬಂಧಪಟ್ಟ ವಲಯಕ್ಕೆಂದು ನಮೂದಿಸಿ ಈ ಕಛೇರಿಯಲ್ಲಿ ಇಟ್ಟಿರುವ ಮೊಹರಾದ ಪೆಟ್ಟಿಗೆಯಲ್ಲಿ ಮಧ್ಯಾಹ್ನ 3.00 ಗಂಟೆಯವರೆಗೆ ಹಾಕಬಹುದಾಗಿದೆ.

   ಬಿ) ಟೆಂಡರ್ ಫಾರಂನ್ನು ವಲಯ ಸ್ಥಳವಾರು ಯೋಜನೆ ಅಥವಾ ಯೋಜನೇತರವಾರು ಪ್ರತ್ಯೇಕವಾಗಿ ಉಪಯೋಗಿಸುವುದು.

2. i) ಭರ್ತಿ ಮಾಡಿದ ಟೆಂಡರುಗಳನ್ನು ವಲಯವಾರು, ಸ್ಥಳ ಮತ್ತು ಕೆಲಸವಾರು ಸಲ್ಲಿಸಬೇಕು. ಹಾಗೂ ದರವನ್ನು ನಮೂದಿಸುವಾಗ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ರವರ 2009–10ನೇ ಸಾಲಿಗೆ ಮಂಜೂರಾದ ಎಸ್.ಎಸ್.ಆರ್. ದರಕ್ಕೆ ಶೇಕಡವಾರು ಇಂತಿಷ್ಟು ಹೆಚ್ಚು ಸಮ ಅಥವಾ ಕಡಿಮೆ ಎಂದು ನಮೂದಿಸಬೇಕು. ಸಿ.ಪಿ.ಟಿ.ಗೆ Manually ಮತ್ತು ಜೆ.ಸಿ.ಬಿ. ಬಳಸಿ ಕಾಮಗಾರಿ ಕೈಗೊಳ್ಳಲು ಪ್ರತ್ಯೇಕವಾಗಿ ದರ ನಮೂದಿಸುವುದು.

   ii) ಅದೇ ರೀತಿ ಮಣ್ಣು ಸಂರಕ್ಷಣೆ ಕಾಮಗಾರಿಗಳಾದ ಅರ್ದನ್ ಬಂಡ್ಸ್, ಅರ್ದನ್ ಎಂಬಾಕ್ ಮೆಂಟ್ಸ್, ಸ್ಟೋನ್ ಪಿಚ್ಚಿಂಗ್ ಕಾಮಗಾರಿ, ಪಿಕ್‌ಅಪ್ ಡ್ಯಾಮ್ಸ್, ಕೃಷಿ ಹೊಂಡ, ನಾಲಾಬಂಡ್ ಇತ್ಯಾದಿಗೆ ಎಂ.ಐ. ಎಸ್.ಆರ್. ದರಕ್ಕೆ ಇಂತಿಷ್ಟು ಹೆಚ್ಚು, ಸಮ ಅಥವಾ ಕಡಿಮೆ ಎಂದು ನಮೂದಿಸಬೇಕು.

   iii) ಮಣ್ಣು ಸಂರಕ್ಷಣೆ ಕಾಮಗಾರಿಗಳಾದ ಚೆಕ್‌ಡ್ಯಾಂ ಗಲ್ಲಿಚೆಕ್ಸ್, ಬೋಲ್ಡರ್ ಚೆಕ್ಸ್, ರಬ್ಬರ್ ಚೆಕ್ಸ್, ಇತ್ಯಾದಿಗಳಿಗೆ ವಾಟರ್ ಶೆಡ್, ಡೆವಲಪ್‌ಮೆಂಟ್ಸ್ (ಎಸ್.ಸಿ.) ಇಲಾಖೆ ಎಸ್.ಆರ್. ಅದರ ದರಕ್ಕೆ ಇಂತಿಷ್ಟು ಜಾಸ್ತಿ ಸಮ ಅಥವಾ ಕಡಿಮೆ ಎಂದು ನಮೂದಿಸಬೇಕು.

v) ಕಲ್ಲಿನ ನಾಮಫಲಕ (5'x 31 'x '3") ಸರಬರಾಜು ಮತ್ತು ಅಳವಡಿಸುವುದಕ್ಕೆ ಪ್ರತ್ಯೇಕವಾಗಿ ದರ ನಮೂದಿಸುವುದು.

2

vi) ತಾಲೀಸ್ ಮಾಡಿ ಬೀಜ ಬಿತ್ತುವ ಕಾಮಗಾರಿಗೆ ಪ್ರತ್ಯೇಕ ದರ ನಮೂದಿಸುವುದು. (Scraping and dibbling of seeds in "Thalis " -30 cms diameter soil worked to 20 cms depth provided with support of boulder protection on lower side to prevent erosen and shoulder of 1 mtr length on either side)

3. ಸ್ವೀಕರಿಸಲಾದ ಟೆಂಡರ್‌ಗಳನ್ನು ಆಯಾ ದಿನಾಂಕಗಳಂದು ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರು ಅಥವಾ ಅವರಿಂದ ನೇಮಿಸಲ್ಪಟ್ಟವರಿಂದ ಅಪರಾಹ್ನ 4.00 ಗಂಟೆಗೆ ಹಾಜರಿರುವ ಅರಣ್ಯ ಗುತ್ತಿಗೆದಾರರ ಸಮ್ಮುಖದಲ್ಲಿ ತೆರೆಯಲಾಗುವುದು.

4. ಕೆಲಸಗಳು ಕಾಲಬದ್ದವಾಗಿದ್ದು ಒಂದು ಪಕ್ಷ ಯಾವುದಾದರೂ ವಲಯದಲ್ಲಿ ಟೆಂಡರ್ ಮುಂಚೆ ಕೆಲಸಗಳನ್ನು ಕೈಗೊಂಡಿದ್ದ ಪಕ್ಷದಲ್ಲಿ ಅಂತಹ ಕೆಲಸಗಳು ಈ ಪ್ರಕಟಣೆಯಿಂದ ಹೊರತುಪಡಿಸಿದವುಗಳಾಗಿರುತ್ತವೆ.

5. ಪ್ರತಿ ಟೆಂಡರ್‌ದಾರರು ಕಾಮಗಾರಿಗಳನ್ನು ನಿರ್ವಹಿಸಲು ಅಗತ್ಯವಿರುವ ಸಲಕರಣೆಗಳನ್ನು ಹಾಗೂ ಸಾಗಾಣಿಕೆ ವಾಹನಗಳನ್ನು ಸ್ವಂತವಾಗಿ ಮಾಡಿಕೊಳ್ಳಬೇಕು.

6. ಈ ಮೇಲಿನ ಕೆಲಸಗಳಿಗೆ ಟೆಂಡರ್ ಸಲ್ಲಿಸಲು ಇಚ್ಚಿಸುವವರು ಆಯಾ ಕೆಲಸಕ್ಕೆ ನಿಗದಿಪಡಿಸಿದ ಇ.ಎಂ.ಡಿ ಮೊತ್ತಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ತುಮಕೂರು ವಿಭಾಗ, ತುಮಕೂರು ಇವರ ಹೆಸರಿಗೆ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದ ಡಿ.ಡಿ. ರೂಪದಲ್ಲಿ ಪಾವತಿಸಬೇಕು.

7. ಗುತ್ತಿಗೆದಾರರು ಸಲ್ಲಿಸುವ ಷರತ್ತುಗಳನ್ನೊಳಗೊಂಡ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

8. ಯಾವುದೇ ಕಾರಣ ನೀಡದೇ ಟೆಂಡರ್‌ಗಳನ್ನು ಒಪ್ಪುವ ಅಥವಾ ತಿರಸ್ಕರಿಸುವ ಹಕ್ಕು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ತುಮಕೂರು ವಿಭಾಗ, ತುಮಕೂರು ಇವರು ಕಾಯ್ದಿರಿಸಿಕೊಂಡಿದ್ದಾರೆ.

9. ಪೂರ್ಣಗೊಂಡ ಕಾಮಗಾರಿಗಳಿಗೆ ಸರ್ಕಾರದಿಂದ ಅನುದಾನವು, ತುಮಕೂರು ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿಗೆ ತಲುಪಿದ ನಂತರ ಪಾವತಿ ಮಾಡಲಾಗುವುದಿಲ್ಲ.

10. ಈ ಮೇಲಿನ ಕಾಮಗಾರಿಗಳ ಹಣ ಪಾವತಿಸುವುದು ಆಯಾ ಯೋಜನೆಗಳಡಿ ಬಿಡುಗಡೆಗೊಳ್ಳುವ ಅನುದಾನ ಮತ್ತು ಅನುಮೋದನೆಯ ನಿಬಂಧನೆಗೆ ಒಳಪಟ್ಟಿರುತ್ತದೆ. ಒಂದು ಪಕ್ಷದಲ್ಲಿ ಸರ್ಕಾರದಿಂದ ಹಣ ಬಿಡುಗಡೆಯಾಗುವುದು ತಡವಾದ ಪಕ್ಷದಲ್ಲಿ ಅಂತಹ ಹಣ ಪಾವತಿಗೆ ಯಾವುದೇ ತರಹದ ಬಡ್ಡಿ ನೀಡಲಾಗುವುದಿಲ್ಲ.

11. ಈ ಅರಣ್ಯ ಕಾಮಗಾರಿಗಳು ಕಾಲಬದ್ದ ಕಾಮಗಾರಿಗಳಾಗಿದ್ದು, ಅವುಗಳನ್ನು ಕಾಲಮಿತಿ ಮತ್ತು ನಿಗದಿತ ಸಮಯಗಳಲ್ಲಿ ಕಾಮಗಾರಿಗಳನ್ನು ನಿರ್ವಹಿಸಲು ವಿಫಲರಾದಲ್ಲಿ ಅಂತಹ ಕಾಮಗಾರಿಗಳನ್ನು ಇಲಾಖಾ ಮೂಲಕ ನಿರ್ವಹಿಸಲಾಗುವುದು ಹಾಗೂ ಇಎಂಡಿ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು, ಇಲಾಖಾ ಮೂಲಕ ನಿರ್ವಹಿಸಿದಲ್ಲಿ ಹೆಚ್ಚು ವೆಚ್ಚವಾದರೆ ಅದನ್ನು ಸಂಬಂಧಪಟ್ಟವರಿಂದ ವಸೂಲಿ ಮಾಡಲಾಗುವುದು.

12. ವಿಜೇತ ಟೆಂಡರ್‌ದಾರರು ಆದೇಶದ 7 ದಿನಗಳೊಳಗಾಗಿ ಕರಾರನ್ನು ಚಾಲ್ತಿ ದರ ಛಾಪಾ ಕಾಗದದ ಮೇಲೆ ತುಮಕೂರು ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಸಮಕ್ಷಮದಲ್ಲಿ ಮಾಡಿಕೊಳ್ಳತಕ್ಕದ್ದು.

13. ಎ) ವಿಜೇತ ಟೆಂಡರ್‌ದಾರರು ಕರಾರಿನಲ್ಲಿ ನಮೂದಿಸಿದ ಅವಧಿಯಲ್ಲಿ ಕಾಮಗಾರಿಯನ್ನು ಪೂರೈಸತಕ್ಕದ್ದು,

ಬಿ) ಅನಿವಾರ್ಯ ಸಂದರ್ಭಗಳಲ್ಲಿ ಅವಧಿಯನ್ನು ವಿಸ್ತರಿಸುವ /ತಿರಸ್ಕರಿಸುವ ಸಂಪೂರ್ಣ ಅಧಿಕಾರ ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಸೇರಿರುತ್ತದೆ.

14. ಕೆಲಸಗಳನ್ನು ಆಯಾಯ ಉಪ ವಿಭಾಗದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಯವರ ಪರಿಶೀಲನೆ ಹಾಗೂ ದೃಢೀಕರಣವನ್ನು ಅನುಸರಿಸಿ ಬಿಲ್ಲನ್ನು ಪಾವತಿ ಮಾಡಲಾಗುವುದು. ಹಾಗೂ ಪಾವತಿಸುವ ಶೇ.2 ರಷ್ಟು ಹಣವನ್ನು ಆದಾಯ ತೆರಿಗೆ ಬಾಬ್ತು ಹಿಡಿಯಲಾಗುವುದು ಮತ್ತು 2.5 ರಷ್ಟು ಭದ್ರತಾ ಠೇವಣಿ ಹಿಡಿಯಲಾಗುವುದು. ಕಾಲಬದ್ದ ಕೆಲಸಗಳ ಬಾಬ್ತು ಸರ್ಕಾರವು ನಿಗದಿಪಡಿಸಿದ ಇತರೆ ತೆರಿಗೆಗಳನ್ನು ಸಂಬಂಧಪಟ್ಟ ಬಿಲ್ಲುಗಳಲ್ಲಿ ಕಟಾಯಿಸಲಾಗುವುದು.

15. ಯಾವುದೇ ತಕರಾರಿನ ಬಗ್ಗೆ ತುಮಕೂರು ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಯವರಲ್ಲಿ ಮೇಲ್ಮನವಿ ಸಲ್ಲಿಸಬಹುದು. ಅವರ ಆದೇಶವು ಅಧೀನಾಧಿಕಾರಿಗಳಿಗೆ ಹಾಗೂ ಗುತ್ತಿಗೆದಾರರಿಗೆ ಪಾಲನಾರ್ಹವಾದುದು.

16. ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಆದೇಶದ ಬಗ್ಗೆ ತೃಪ್ತಿಯಿಲ್ಲವಾದರೆ ಹಾಸನ ವೃತ್ತದ ಅರಣ್ಯ ಸಂರಕ್ಷಣಾಧಿಕಾರಿಯವರಲ್ಲಿ ಮೇಲ್ಮನವಿ ಸಲ್ಲಿಸಬಹುದು. ಹಾಗೂ ಅವರು ಕೊಡುವ ತೀರ್ಮ ಅಂತಿಮವಾದುದು.

17. ಕಾಮಗಾರಿ ಸ್ಥಳಗಳು ತಾತ್ಕಾಲಿಕವಾಗಿದ್ದು ಅವುಗಳ ಸ್ಥಳ ಬದಲಾವಣೆಗಳಾಗುವ ಸಂಭವವಿರುತ್ತದೆ. ಹೆಚ್ಚಿನ ಮಾಹಿತಿಗಾಗಿ ಕಛೇರಿ ವೇಳೆಯಲ್ಲಿ ಸಂಪರ್ಕಿಸಬಹುದು.

18. ಕೆಲಸದ ಪರಿಣಾಮ ಹೆಚ್ಚುವರಿ ಅಥವಾ ಕಡಿಮೆಯಾಗುವ ಸಾಧ್ಯತೆಯಿದ್ದು ಹೆಚ್ಚುವರಿಯಾದ ಕೆಲಸವನ್ನು ಹಾಗೂ ಇತರೆ ಕಾಮಗಾರಿಗಳನ್ನು ಸಹ ಒಪ್ಪಿಗೆಯಾದ ಟೆಂಡರಿನ ದರದಲ್ಲಿ ಆಯಾ ವಲಯ ಅರಣ್ಯಾಧಿಕಾರಿಗಳು ಸೂಚಿಸುವ ಜಾಗದಲ್ಲಿಯೇ ಮಾಡತಕ್ಕದ್ದು.

19. ಕರ್ನಾಟಕ ಅರಣ್ಯ ಕಾಯ್ದೆ ಕರ್ನಾಟಕ ಅರಣ್ಯ ಸಂಹಿತೆ, ಕರ್ನಾಟಕ ಅರಣ್ಯ ಮ್ಯಾನ್ಯುಯಲ್ ಹಾಗೂ ಸರ್ಕಾರಿ ಅಧಿಸೂಚನೆ, ಆದೇಶಗಳು ಮತ್ತು ಕಾಲಕಾಲಕ್ಕೆ ಇಲಾಖೆಯಿಂದ ನೀಡಿದ ಸುತ್ತೋಲೆ ಮೇಲೆ ನಿರ್ದೇಶನ ಪ್ರಕಾರ ಅರಣ್ಯ ಗುತ್ತಿಗೆದಾರರು ಹಾಗೂ ಒಟ್ಟಾಗಿ ಕಾಮಗಾರಿಗಳನ್ನು ನಿರ್ವಹಿಸುವುದು.

20. ಮುಂದುವರಿದ ಕಾಮಗಾರಿಗಳಲ್ಲಿ ಮೌಂಡ್ ಫಾರ್ಮೇಷನ್ Refilling of trenches / pits, ಸಸಿಗಳ ಸಾಗಾಣಿಕೆ, ಬೀಜ ಬಿತ್ತುವುದು, ಸಸಿ ನೆಡುವುದು, ಗೊಬ್ಬರ ಹಾಕುವುದು, Cultural operation Weeding, Hoeing, Scraping, saucer bharov, ಸಸಿಗಳಿಗೆ ನೀರು ಹಾಕುವುದು, ನಾಮಫಲಕ ಅಳವಡಿಸುವುದು, ಸಸಿಗಳಿಗೆ ಆಧಾರ ಕಡ್ಡಿ ಕಟ್ಟುವುದು ಬೆಂಕಿ ಸಂರಕ್ಷಣೆ ಕಾಮಗಾರಿ ಇತ್ಯಾದಿ ಸೇರಿರುತ್ತದೆ.

ಪಿ.ಆರ್. 339

ಉಪ ಅರಣ್ಯ ಸಂರಕ್ಷಣಾಧಿಕಾರಿ, ತುಮಕೂರು ವಿಭಾಗ, ತುಮಕೂರು.

**OFFICE OF THE SUPERINTENDENT OF POLICE, KOLAR DISTRICT, KOLAR**

**NOTIFICATION No. M.V.C. 125/2009-10, Dated: 13th May 2009**

**Sub:** Disposal of Condemned Old Tyres & Tubes and Spare parts tender-Cum-auction basis-reg.

**Ref:** 1. Govt. Order No.198/EMV/2000, B'lore, Dtd: 19.06.2003.
2. IGP., C/R., B'lore letter No.Act/Mt/47/02-03, Dtd:06.05.2009.

It is brought to the Notice of the public that the following quantity of condemned Old Tyres & Tbbes and Spare parts are Scheduled to be auctioned on tender-Cum-auction basis on 30.05.2009 at 11:00 AM in the premises of DAR, Kolar. Hence the sealed tenders are requisitioned from the interested buyers along with the E.M.D., of Rs.3,000/- (Rupees three thousand only) through DD/Cash. The same will be received up to 29.05.2009 at 5 PM. The details of condemned Old Tyres & Tubes and Spare parts are as follows.

| | | | Tyres | Tubes |
|---|---|---|---|---|
| a) | 600 x 16 | - | 110 | 110 |
| b) | 195 x 75/14 | - | 10 | 10 |
| c) | 325 x 15 | - | 1 | 1 |
| d) | 215 x 14 | - | 15 | 15 |
| e) | 195 x 80 x 15 | - | 60 | 60 |
| f) | 78-15 | - | 10 | 10 |

**OLD SPARE PARTS**

Old Spare Parts about ½ tonne.

Terms and conditions of sale etc., can be obtained at this office on any working days during office hours. The interested persons may also inspect the said items at DAR, Kolar on any working days between 2 PM to 5 PM.

P.R. 342 Superintendent of Police, Kolar District, Kolar.

**ಪೊಲೀಸ್ ಅಧೀಕ್ಷಕರವರ ಕಛೇರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ಟೆಂಡರ್ ಕಂ ಬಹಿರಂಗ ಹರಾಜು ಅಧಿಸೂಚನೆ**

**ನಂ: ಲೆಕ್ಕ(6)ವಾ.ವಿ/138/2008–09, ದಿನಾಂಕ: 16ನೇ ಮೇ 2009**

**ವಿಷಯ:** ಶಿವಮೊಗ್ಗ ಜಿಲ್ಲೆಯ ನಿರುಪಯುಕ್ತ ಪೊಲೀಸ್ ವಾಹನವನ್ನು ಟೆಂಡರ್ ಕಂ ಬಹಿರಂಗ ಹರಾಜು ಮಾಡುವ ಬಗ್ಗೆ.

**ಉಲ್ಲೇಖ:** 1. ಸರ್ಕಾರಿ ಆದೇಶ ನಂ:ಹೆಚ್‌ಡಿ/17/ಇಎಂವಿ/08 ದಿ: 05.06.08.
2. ಮಾನ್ಯ ಡಿಜಿ ಮತ್ತು ಐಜಿಪಿ, ಬೆಂಗಳೂರು ರವರ ಹಿಂಬರಹ ಪತ್ರ ನಂ:ವಾಸಾ(1)18/2008–09 ದಿ:31.12.2008.
3. ಪ್ರಧಾನ ಕಛೇರಿ ಪತ್ರ ಸಂ.ವಾಸಾ(1)/18/2008–09 ದಿ: 01.04.2009.
4. ಪ್ರಾದೇಶಿಕ ಸಾರಿಗೆ ಅಧಿಕಾರಿ ಶಿವಮೊಗ್ಗರವರ ಪತ್ರ ಸಂ: ದಿ: 15.04.09.

ಸಾರ್ವಜನಿಕರಿಗೆ ಮಾಹಿತಿಗಾಗಿ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಜಿಲ್ಲಾ ಸಶಸ್ತ್ರ ಮೀಸಲು ಪಡೆ, ಶಿವಮೊಗ್ಗ ಈ ಕಛೇರಿಯ ಆವರಣದಲ್ಲಿ ಯಥಾ ಸ್ಥಿತಿಯಲ್ಲಿರುವ ಕೆಳಕಂಡ ಪೊಲೀಸ್ ವಾಹನವನ್ನು ಟೆಂಡರ್ ಕಂ ಬಹಿರಂಗ ಹರಾಜು ಮೂಲಕ ಶಿವಮೊಗ್ಗ ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಕಛೇರಿಯ ಆವರಣದಲ್ಲಿ ದಿ: 20.06.2009 ರಂದು ಬೆಳಿಗ್ಗೆ 11.00 ಗಂಟೆಗೆ ಬಹಿರಂಗ ಹರಾಜು ಮಾಡಲಾಗುವುದು. ಇಚ್ಛೆಯುಳ್ಳ ಸಾರ್ವಜನಿಕರು ಸದರಿ ಟೆಂಡರ್ ಕಂ ಬಹಿರಂಗ ಹರಾಜಿನಲ್ಲಿ ಭಾಗವಹಿಸಿ ನಿರುಪಯುಕ್ತಗೊಳಿಸಿದ ವಾಹನವನ್ನು ಖರೀದಿಸಬಹುದಾಗಿದೆ.

**ಹರಾಜು ಮಾಡಲು ಉದ್ದೇಶಿಸಿರುವ ವಾಹನದ ವಿವರ**

| ಕ್ರ. ಸಂ. | ನೊಂದಣಿ ಸಂ | ಮಾಡೆಲ್ | ಖರೀದಿಸಿದ ವರ್ಷ |
|---|---|---|---|
| 1. | ಸಿಎಜಿ–7611 | ಮಹೀಂದ್ರ ಜೀಪು | 1985 23 ವರ್ಷ |

**ಹರಾಜಿನ ಷರತ್ತುಗಳು ಮತ್ತು ನಿಬಂಧನೆಗಳು:–**

1) ಮೊಹರು ಮಾಡಿದ (ಸೀಲ್ಡ್ ಟೆಂಡರ್) ಲಕೋಟೆಯನ್ನು ಜಿಲ್ಲಾ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ವಿಳಾಸಕ್ಕೆ ಕಳುಹಿಸಬೇಕು. ಲಕೋಟೆಯ ಮೇಲೆ ನಿರುಪಯುಕ್ತ ವಾಹನ ಟೆಂಡರ್ ಸಂಖ್ಯೆ: ––––––––––––––ನ್ನು ಖರೀದಿಸುವ ಬಗ್ಗೆ ಎಂಬುದನ್ನು ಪ್ರತ್ಯೇಕವಾಗಿ ಬಿಡಿ ಅಕ್ಷರಗಳಲ್ಲಿ ನಮೂದಿಸಬೇಕು.

2) ವಾಹನಗಳ ಖರೀದಿಗಾಗಿ ಸಲ್ಲಿಸಬಯಸುವ ಪ್ರತಿಯೊಬ್ಬ ಸವಾಲುದಾರರು ವಾಹನಕ್ಕೆ ರೂ. 3000–00 (ರೂ. ಮೂರು ಸಾವಿರ ಮಾತ್ರ) ಠೇವಣಿ ಹಣವನ್ನು ಡಿಡಿ / ನಗದು ಮೂಲಕ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ರವರ ಹೆಸರಿನಲ್ಲಿ ಅರ್ಜಿಯ ಜೊತೆ ನೀಡತಕ್ಕದ್ದು. ಠೇವಣಿ ಹಣಕ್ಕೆ ಬಡ್ಡಿಯನ್ನು ಕೊಡಲಾಗುವುದಿಲ್ಲ. ಠೇವಣಿ ಹಣವಿಲ್ಲದೆ ಹರಾಜಿನಲ್ಲಿ ಭಾಗವಹಿಸುವಂತಿಲ್ಲ. ಠೇವಣಿ ಇಲ್ಲದೆ ಕಳಿಸಲಾದ ಅರ್ಜಿಯನ್ನು ತಿರಸ್ಕರಿಸಲಾಗುವುದು.

3) ಈ ನಿರುಪಯುಕ್ತ ವಾಹನಗಳ ಖರೀದಿಗಾಗಿ ಹರಾಜಿನಲ್ಲಿ ಭಾಗವಹಿಸುವ ಆಸಕ್ತ ಸಾರ್ವಜನಿಕರು ಪ್ರತಿಯೊಂದು ವಾಹನಕ್ಕೆ ರೂ. 3000–00 ಗಳಂತೆ ಠೇವಣಿ ಹಣವನ್ನು ಹರಾಜಿನ ಮುನ್ನ ನಗದಾಗಿ ಪಾವತಿಸತಕ್ಕದ್ದು. ಠೇವಣಿ ಹಣವನ್ನು ಪಾವತಿಸದೇ ಹರಾಜಿನಲ್ಲಿ ಭಾಗವಹಿಸುವಂತಿಲ್ಲ.

4) ಟೆಂಡರ್ ಫಾರ್ಮ್‌ನಲ್ಲಿ ಅತೀ ಹೆಚ್ಚಿನ ದರವನ್ನು ಅಂಕಿ ಮತ್ತು ಅಕ್ಷರಗಳೆರಡರಲ್ಲಿಯೂ ಬರೆದಿರಬೇಕು. ಟೆಂಡರ್ ಫಾರ್ಮ್‌ನಲ್ಲಿ ಬೆಲೆಯನ್ನು ಬರೆಯುವಾಗ ಏನಾದರೂ ತಿದ್ದುಪಡಿ ಮಾಡಿದ್ದರೆ ಆ ಸ್ಥಳದಲ್ಲಿ ಟೆಂಡರ್‌ದಾರರು ಪೂರ್ಣ ಸಹಿ ಮಾಡಿ ದೃಢೀಕರಿಸಬೇಕು.

5) ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.

6) ಪೂರ್ಣಗೊಳಿಸಿದ ಟೆಂಡರ್ ಫಾರಂಗಳನ್ನು ದಿನಾಂಕ: 19.06.2009 ರ ಸಂಜೆ 4–00 ಗಂಟೆಯ ಒಳಗಾಗಿ ಸ್ವೀಕರಿಸಲಾಗುವುದು. ನಂತರ ಬಂದ ಟೆಂಡರ್ ಫಾರಂಗಳನ್ನು ಪರಿಗಣಿಸಲಾಗುವುದಿಲ್ಲ.

7) ಟೆಂಡರ್‌ದಾರರು ಸಹ ಬಹಿರಂಗ ಹರಾಜಿನಲ್ಲಿ ಹೆಚ್ಚಿನ ಠೇವಣಿ ಹಣವಿಲ್ಲದೆ ಭಾಗವಹಿಸಬಹುದು.

8) ಜಿಲ್ಲಾ ಪೊಲೀಸ್ ಅಧೀಕ್ಷಕರುಗಳು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಬಹಿರಂಗ ಹರಾಜನ್ನು ನಡೆಸುವರು. ಠೇವಣಿಯನ್ನು ತುಂಬಿದ ಟೆಂಡರ್‌ದಾರರು ಅಥವಾ ಸವಾಲುದಾರರು ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅರ್ಹರಾಗಿರುತ್ತಾರೆ.

9) ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬೆಲೆ (ದರವನ್ನು) ದಾಖಲುಗೊಳಿಸಿದ ನಂತರ ಸ್ವೀಕೃತವಾದ ಟೆಂಡರ್‌ಗಳನ್ನು ಜಿಲ್ಲಾ ಪೊಲೀಸ್ ಅಧಿಕಾರಿಗಳು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಸಾರ್ವಜನಿಕರ ಸಮಕ್ಷಮ ಬಹಿರಂಗ ಪಡಿಸುವರು. ಈ ಎರಡರಲ್ಲಿ ಅತೀ ಹೆಚ್ಚಿನ ದರವನ್ನು ಯಾರು ನಮೂದಿಸಿರುವರೋ ಅವರನ್ನು ಯಶಸ್ವಿ ಟೆಂಡರ್ ಸವಾಲುದಾರರೆಂದು ಪರಿಗಣಿಸಲಾಗುವುದು.

10) ಯಶಸ್ವಿಯಾದ ಟೆಂಡರ್‌ದಾರರು ಸವಾಲುದಾರರು ವಾಹನಗಳ ಒಟ್ಟು ಬೆಲೆಯ ಶೇ. 25% ರಷ್ಟು ಹಣವನ್ನು (ಠೇವಣಿ ಬಿಟ್ಟು) ಸ್ಥಳದಲ್ಲಿಯೇ ತುಂಬಬೇಕು. ಉಳಿದ ಹಣವನ್ನು ಮಹಾನಿರ್ದೇಶಕರು ಮತ್ತು ಪೊಲೀಸ್ ಮಹಾನಿರೀಕ್ಷಕರು, ಕರ್ನಾಟಕ ರಾಜ್ಯ, ಬೆಂಗಳೂರುರವರು ಸದರಿ ಹರಾಜನ್ನು ಒಪ್ಪಿದ ನಂತರವೇ ಸಂಪೂರ್ಣ ಹಣ ಪಾವತಿ ಮಾಡಿ ತಮ್ಮ ಸ್ವಂತ ಖರ್ಚಿನಿಂದ ಹಾಗೂ 7 ದಿನಗಳ ಒಳಗಾಗಿ ವಾಹನಗಳನ್ನು ತೆಗೆದುಕೊಂಡು ಹೋಗಲು ಒಪ್ಪಿಗೆ ನೀಡಲಾಗುವುದು. ತಪ್ಪಿದಲ್ಲಿ ಈಗಾಗಲೇ ಇವರು ತುಂಬಿರುವ ಶೇಕಡಾ 25% ರಷ್ಟು ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಹಾಗೂ ಮತ್ತೊಮ್ಮೆ ಹೊಸದಾಗಿ ಅಧಿಸೂಚನೆ ಹೊರಡಿಸಿ ಮರು ಹರಾಜು ಮಾಡಲಾಗುವುದು. ಮರು ಹರಾಜಿನಲ್ಲಿ ಸರ್ಕಾರಕ್ಕೆ ಏನಾದರೂ ನಷ್ಟವಾದಲ್ಲಿ ಅಂದರೆ ಮೊದಲನೆಯ ಹರಾಜಿಗಿಂತ ಕಡಿಮೆಯಾದರೆ ಸದರಿಯವರಿಂದಲೇ ವಸೂಲಿ ಮಾಡಲಾಗುವುದು.

11) ಎಲ್ಲಾ ಹಣವನ್ನು ಜಿಲ್ಲಾ ಪೊಲೀಸ್ ಅಧೀಕ್ಷಕರ ಕಛೇರಿಯಲ್ಲಿ ನಗದು ರೂಪದಲ್ಲಿ ತುಂಬಬೇಕು. ಚೆಕ್ಕುಗಳ ಮೂಲಕ ತುಂಬಿದ ಹಣವನ್ನು ಸ್ವೀಕರಿಸಲಾಗುವುದಿಲ್ಲ.

12) ಹರಾಜು ಮುಗಿದ ನಂತರ ಯಶಸ್ವಿಯಾಗದ ಟೆಂಡರ್‌ದಾರರು / ಸವಾಲುದಾರರ ಠೇವಣಿ ಹಣವನ್ನು ಕೂಡಲೇ ಹಿಂದಿರುಗಿಸಲಾಗುವುದು.

13) ಮಾರಾಟ ತೆರಿಗೆಯನ್ನು ಚಲಾವಣೆಯಲ್ಲಿದ್ದ ದರದ ನಿಯಮಗಳ ಆಧಾರದ ಮೇರೆಗೆ ಸವಾಲಿನ ಹಣದ ಜೊತೆಗೆ ವಸೂಲಿ ಮಾಡಲಾಗುವುದು.

14) ಹರಾಜು ಮಾಡುವ ವೇಳೆಯಲ್ಲಿ ಏನಾದರೂ ತಕರಾರುಗಳು ಬಂದಲ್ಲಿ ಜಿಲ್ಲಾ ಪೊಲೀಸ್ ಅಧಿಕಾರಿಗಳು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಕೈಗೊಳ್ಳುವ ನಿರ್ಣಯವೇ ಅಂತಿಮವಾಗಿರುತ್ತದೆ.

15) ಹರಾಜಿನಲ್ಲಿ ಯಾವುದೇ ಸವಾಲನ್ನು / ಟೆಂಡರನ್ನು ಯಾವುದೇ ಕಾರಣಕ್ಕಾಗಿ ರದ್ದುಗೊಳಿಸುವ ಅಥವಾ ಮುಂದೂಡುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಜಿಲ್ಲಾ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರು ಹೊಂದಿರುತ್ತಾರೆ. ಹಾಗೂ ಇವರ ನಿರ್ಣಯವೇ ಅಂತಿಮವಾಗಿರುತ್ತದೆ.

16) ಇಚ್ಛೆಯುಳ್ಳ ಟೆಂಡರ್‌ದಾರರು ಮತ್ತು ಸವಾಲುದಾರರು ಹರಾಜು ಮಾಡಲಿಚ್ಚಿಸಿರುವ ನಿರುಪಯುಕ್ತ ವಾಹನಗಳನ್ನು ಜಿಲ್ಲಾ ಸಶಸ್ತ್ರ ಮೀಸಲು ಪಡೆ, ಶಿವಮೊಗ್ಗ ಇವರ ಕಛೇರಿ ವೇಳೆಯಲ್ಲಿ ನೋಡಬಹುದು.

17) ಟೆಂಡರ್‌ದಾರರು ವಾಹನಗಳಿಗೆ ಅತೀ ಹೆಚ್ಚಿನ ಬೆಲೆಯನ್ನು ಅನುಬಂಧದಲ್ಲಿ ಕಾಣಿಸಿದ ನಮೂನೆಯಲ್ಲಿ ತೋರಿಸಬೇಕು.

**ಟೆಂಡರ್ ಫಾರಂ ನಮೂನೆ**

**ಅನುಪಯುಕ್ತ ಪೊಲೀಸ್ ವಾಹನಗಳಿಗಾಗಿ ಟೆಂಡರು**

ಗೆ,
ಪೊಲೀಸ್ ಸೂಪರಿಂಟೆಂಡೆಂಟ್ ರವರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಮಾನ್ಯರೇ,

ತಮ್ಮ ಕಛೇರಿಯ ಅಧಿಸೂಚನೆ ಸಂಖ್ಯೆ:ಪಿಎಂಟಿ/138/2008–09 ದಿನಾಂಕ: 6/05/2009 ರಲ್ಲಿ ತಿಳಿಸಿರುವ ನಿರುಪಯುಕ್ತವಾದ ವಾಹನಗಳು

1) ವಾಹನದ ಹೆಸರು ಮತ್ತು ಸಂಖ್ಯೆ: ರೂ............(ರೂಪಾಯಿ...........................) ಗಳಿಗೆ ಖರೀದಿಸಲು ಇಚ್ಛಿಸಿರುತ್ತೇನೆ.

ತಮ್ಮ ವಿಶ್ವಾಸಿ,

(ಬಿಡ್‌ದಾರರ ಪೂರ್ಣ ಸಹಿ ಮತ್ತು ವಿಳಾಸ)

ಪಿ.ಆರ್. 343 ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರ ಕಛೇರಿ, ನಂ.17, ಜಯನಿವಾಸ, ಶಂಕರಮಠ ರಸ್ತೆ, ಬಸವನಗುಡಿ, ಬೆಂಗಳೂರು–560 004**

**ಅಧಿಸೂಚನೆ**

**ಸಂಖ್ಯೆ:ಸಿಬ್ಬಂದಿ–2/ನೇಮಕಾತಿ/02/2004–05, ದಿನಾಂಕ: 4ನೇ ಮೇ 2009**

**ವಿಷಯ:** ಸಹಕಾರ ಸಂಘಗಳ ಲೆಕ್ಕಪರಿಶೋಧಕರ ನೇಮಕಾತಿ ಸಲುವಾಗಿ ಅರ್ಜಿ ಆಹ್ವಾನಿಸಿ, ದಿನಾಂಕ: 03.09.1996 ರಂದು ಹೊರಡಿಸಿದ ಪ್ರಕಟಣೆಯನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:** 1. ಈ ಕಛೇರಿಯ ಅಧಿಸೂಚನೆ ಸಂಖ್ಯೆ: ಸಿಬ್ಬಂದಿ–2/ನೇಮಕಾತಿ–2/1994–95, ದಿನಾಂಕ: 03.09.1996.

2. ಸರ್ಕಾರದ ಪತ್ರ ಸಂಖ್ಯೆ:ಸಇ/175/ಎಲೆಸೇ/2008, ದಿನಾಂಕ: 19.01.2009.

**ಪ್ರಸ್ತಾವನೆ:**

ಈ ಇಲಾಖೆಯಲ್ಲಿ ಖಾಲಿಯಿದ್ದ ಸಹಕಾರ ಸಂಘಗಳ ಲೆಕ್ಕಪರಿಶೋಧಕರ ಹುದ್ದೆಗಳಲ್ಲಿ 160 ಲೆಕ್ಕಪರಿಶೋಧಕರ ಹುದ್ದೆಗಳನ್ನು ನೇಮಕಾತಿ ಮಾಡಲು ಉಲ್ಲೇಖ (1)ರಂತೆ ಅರ್ಜಿಗಳನ್ನು ಆಹ್ವಾನಿಸಿ, ಪ್ರಕಟಣೆ ನೀಡಲಾಗಿತ್ತು. ಈ ಪ್ರಕಟಣೆಯಂತೆ ಒಟ್ಟು 15,720 ಅರ್ಜಿಗಳು ಸ್ವೀಕೃತವಾಗಿರುತ್ತದೆ. ಈ ಅರ್ಜಿಗಳನ್ನು ಪರಿಶೀಲಿಸಿ, ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಪ್ರಕ್ರಿಯೆ ಜಾರಿಯಲ್ಲಿತ್ತು. ಈ ಹಂತದಲ್ಲಿ ಸರ್ಕಾರದ ಪತ್ರ ಸಂಖ್ಯೆ: ಸಮಾತೂ/112/ಸನಿನೇ/1998, ದಿನಾಂಕ: 18.08.1998 ರಲ್ಲಿ ರಾಜ್ಯ ಸರ್ಕಾರ ಶೇಕಡ 5 ರಷ್ಟು ಸಿಬ್ಬಂದಿ ಸಂಖ್ಯೆಯನ್ನು ಕಡಿಮೆಗೊಳಿಸುವ ಬಗ್ಗೆ ಆಗಿನ ಮಾನ್ಯ ಮುಖ್ಯಮಂತ್ರಿಗಳು ಘೋಷಿಸಿದ ಕಾರಣ ದಿನಾಂಕ: 01.04.1998 ರಂದು ಖಾಲಿಯಿರುವ ಹುದ್ದೆಗಳನ್ನು ಭರ್ತಿ ಮಾಡಕೂಡದೆಂದು ಹಾಗೂ ನೇಮಕಾತಿ ಪ್ರಕ್ರಿಯೆ ಪ್ರಾರಂಭಿಸಿದ್ದಲ್ಲಿ, ಸ್ಥಗಿತಗೊಳಿಸಲು ಸೂಚಿಸಿದ್ದು, ಅದರಂತೆ ಮೇಲ್ಕಂಡಂತೆ ಪ್ರಾರಂಭಿಸಿದ್ದ ನೇಮಕಾತಿ ಪ್ರಕ್ರಿಯೆಯನ್ನು ಸ್ಥಗಿತಗೊಳಿಸಲಾಗಿತ್ತು.

ಸರ್ಕಾರದ ಪತ್ರ ಸಂಖ್ಯೆ: ಸಿಎಂಡಬ್ಲ್ಯೂ/30/ಇಸಿಎ/199, ದಿನಾಂಕ:28.02.2002 ರಲ್ಲಿ ಹೊಸದಾಗಿ 100 ಲೆಕ್ಕಪರಿಶೋಧಕರ ಹುದ್ದೆಯನ್ನು ಭರ್ತಿ ಮಾಡಲು ಅನುಮತಿ ನೀಡಿದ್ದು, ಈ ಅನುಮತಿಯಂತೆ ಕರ್ನಾಟಕ ಲೋಕಸೇವಾ ಆಯೋಗದ ಮುಖಾಂತರ ಹೊಸದಾಗಿ 100 ಲೆಕ್ಕಪರಿಶೋಧಕರ ಹುದ್ದೆಯನ್ನು ಭರ್ತಿ ಮಾಡಲು ಕ್ರಮವಿಡಲಾಗಿರುತ್ತದೆ. ಈ ಹಿನ್ನೆಲೆಯಲ್ಲಿ ದಿನಾಂಕ: 03.09.1996ರ ಈ ಕಛೇರಿಯಿಂದ ನೇಮಕಾತಿ ಸಲುವಾಗಿ ಅರ್ಜಿಗಳನ್ನು ಆಹ್ವಾನಿಸಿ, ಹೊರಡಿಸಲಾಗಿರುವ ಪ್ರಕಟಣೆಯನ್ನು ರದ್ದುಪಡಿಸಲು ಸರ್ಕಾರದ ಅನುಮತಿ ಕೋರಿದ್ದು, ಸರ್ಕಾರದ ಉಲ್ಲೇಖಿತ (2)ರ ಪತ್ರದಲ್ಲಿ ಈ ಪ್ರಕ್ರಿಯೆಗೆ ಸಂಬಂಧಿಸಿದಂತೆ ನ್ಯಾಯಾಲಯದಲ್ಲಿ ಪ್ರಕರಣಗಳು ಇಲ್ಲದೆ ಇದ್ದಲ್ಲಿ, ಈ ಪ್ರಕಟಣೆಯನ್ನು ರದ್ದುಪಡಿಸಿ, ಈ ಸಂಬಂಧ ಸ್ವೀಕೃತವಾಗಿರುವ 15,720 ಅರ್ಜಿಗಳನ್ನು ವಿಲೇವಾರಿ ಮಾಡಲು ಯಾವುದೇ ಅಭ್ಯಂತರವಿರುವುದಿಲ್ಲವೆಂದು ತಿಳಿಸಿದೆ. ಆದುದರಿಂದ, ಉಲ್ಲೇಖಿತ (1)ರ ಈ ಕಛೇರಿಯ ಅಧಿಸೂಚನೆಯನ್ನು ರದ್ದುಪಡಿಸಲು ತೀರ್ಮಾನಿಸಿ, ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ**

ಇಲಾಖೆಯಲ್ಲಿ ಖಾಲಿಯಿದ್ದ ಸಹಕಾರ ಸಂಘಗಳ ಲೆಕ್ಕಪರಿಶೋಧಕರುಗಳ ಪೈಕಿ 160 ಲೆಕ್ಕಪರಿಶೋಧಕರ ಹುದ್ದೆಗಳನ್ನು ಭರ್ತಿ ಮಾಡಲು ಈ ಕಛೇರಿಯಿಂದ ಹೊರಡಿಸಲಾದ ಉಲ್ಲೇಖಿತ (1)ರ ಅಧಿಸೂಚನೆಯನ್ನು ರದ್ದುಪಡಿಸಿ, ಈ ಸಂಬಂಧ ಸ್ವೀಕೃತವಾದ 15,720 ಅರ್ಜಿಗಳನ್ನು ವಿಲೇವಾರಿ ಮಾಡಲು ಆದೇಶಿಸಿದೆ.

ನಿರ್ದೇಶಕರು.

ಪಿ.ಆರ್. 338 ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ನಿರ್ದೇಶಕರ ಕಛೇರಿ, ಬೆಂಗಳೂರು.

**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಕಾರ್ಯಪಾಲಕ ಅಭಿಯಂತರವರ ಕಛೇರಿ, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ**

**ನಂ. ಇಎನ್‌ಹೆಚ್/ಸಿಟಿಎ/ಎಇ–1/.ಪಿಎಸ್‌ಡಬ್ಲ್ಯೂಪಿಎಸ್/ಎನ್‌ಹೆಚ್–63/2008–09/274, ದಿನಾಂಕ: 16ನೇ ಮೇ 2009.**

**ಇ–ಪ್ರೊಕ್ಯೂರ್‌ಮೆಂಟ್ ಪ್ರಕ್ರಿಯೆಯಡಿಯಲ್ಲಿಯ ಅಲ್ಪಾವಧಿ ಟೆಂಡರ್(2ನೇ ಕರೆ)**

**(ಎರಡು ಲಕೋಟೆ ಪದ್ಧತಿ)**

ಕರ್ನಾಟಕ ರಾಜ್ಯ ರಾಜ್ಯಪಾಲರ ಹೆಸರಿನಲ್ಲಿ ಕಾರ್ಯಪಾಲಕ ಇಂಜಿನಿಯರ್ ರಾಷ್ಟ್ರೀಯ ಹೆದ್ದಾರಿ ವಿಭಾಗ ಚಿತ್ರದುರ್ಗ ಕಛೇರಿಯಿಂದ ಕೆಳಕಂಡ ಕಾಮಗಾರಿಗಳಿಗೆ ಅರ್ಹ ಗುತ್ತಿಗೆದಾರರಿಂದ ಇ–ಪ್ರೊಕ್ಯೂರ್‌ಮೆಂಟ್ ಪ್ರಕ್ರಿಯೆಯಡಿಯಲ್ಲಿಯ ಅಲ್ಪಾವಧಿ ಟೆಂಡರ್‌ಅನ್ನು ಕರೆಯಲಾಗಿದೆ.

| ಕ್ರಮ ಸಂಖ್ಯೆ | ಕಾಮಗಾರಿ ಹೆಸರು | ಟೆಂಡರ್‌ಗೆ ಇಡಲಾದ ಮೊತ್ತ ರೂ. ಲಕ್ಷಗಳಲ್ಲಿ | ಇ.ಎಂ.ಡಿ ಮೊತ್ತ ರೂ. ಲಕ್ಷಗಳಲ್ಲಿ |
|---|---|---|---|
| 1 | ರಾಷ್ಟ್ರೀಯ ಹೆದ್ದಾರಿ–63ರ ಅಂಕೋಲ–ಗುತ್ತಿ ಸೆಕ್ಷನ್‌ನ ಕಿ.ಮೀ. 344.00 ರಿಂದ 349.00 ರವರೆಗಿನ ರಸ್ತೆಯ ಪೇವ್ಡ್ ಶೋಲ್ಡರ್‌ನ ಬಲಗೊಳಿಸುವ ಕಾಮಗಾರಿ (Work Indent No. NH/2008-09/WORK_INDENT108) | 503.00 | 10.06 |

| | | |
|---|---|---|
| ಟೆಂಡರ್ ಬಗ್ಗೆ ವಿಚಾರಿಸಲು/ಮಾಹಿತಿ ಪಡೆಯಲು ಕೊನೆಯ ದಿನಾಂಕ | : | 30–05–2009 ಸಮಯ: 16.00 |
| ಪೂರ್ವಭಾವಿ ಸಭೆಯ ದಿನಾಂಕ ಮತ್ತು ವೇಳೆ | : | 2–06–2009 ಸಮಯ: 11.00 |
| ಟೆಂಡರ್ ಸಲ್ಲಿಸುವ ಅಂತಿಮ ದಿನಾಂಕ ಮತ್ತು ವೇಳೆ | : | 4–06–2009 ಸಮಯ: 16.00 |
| ತಾಂತ್ರಿಕ ಬಿಡ್ ಅನ್ನು ತೆರೆಯುವ ದಿನಾಂಕ ಮತ್ತು ವೇಳೆ | : | 6–06–2009 ಸಮಯ: 17.00 |
| ಆರ್ಥಿಕ ಬಿಡ್‌ಅನ್ನು ತೆರೆಯುವ ದಿನಾಂಕ ಮತ್ತು ವೇಳೆ | : | 8–06–2009 ಸಮಯ: 11.00 |

ಹೆಚ್ಚಿನ ಮಾಹಿತಿ ಬೇಕಾದಲ್ಲಿ ಕಾರ್ಯಪಾಲಕ ಅಭಿಯಂತರವರ ಕಛೇರಿ, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಅಥವಾ ಸರ್ಕಾರಿ ವೆಬ್‌ಸೈಟ್ : http://eproc.karnataka.gov.in. ಅನ್ನು ಸಂಪರ್ಕಿಸಬಹುದಾಗಿದೆ.

ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ.

**Public Works, Ports & Inland water transport Department**

**Office of the Executive Engineer, National Highway Division, Chitradurga**

**No.ENH/CTA/AE-1/SBD/Paved Shoulders/NH-63, 2008-09/ 274 Dated : 16th May 2009.**

**SHORT TERM TENDER UNDER E-PROCUREMENT(2nd CALL)**

**(Two Cover System)**

Tender is invited from the qualified bidders for the following works under E-procurement procedure.

| Sl No | Name of Work | Amount put to tender Rs in Lakhs | Bid Security /EMD.Rs in Lakhs |
|---|---|---|---|
| 1 | Providing strengthening with Paved Shoulders from Km. 344 .00 to 349.00 of NH-63 Ankola-Gooty Section (National Highway division, Chitradurga) in the state of Karnataka. (Work Indent No. NH/2008-09/WORK_INDENT108) | 503.00 | 10.06 |

| | | |
|---|---|---|
| Last Date & Time for Tender Queries/ Clarifications | : | 30-05-2009 at 16.00 |
| Date of Pre-bid Meeting | : | 2-06-2009 at 11.00 |
| Last Date & Time for receipt of tenders | : | 4-06-2009 at 16.00 |
| Date & Time for Opening of Technical Bid | : | 6-06-2009 at 17.00 |
| Date & Time for Opening of Financial Bid | : | 8-06-2009 at 11.00 |

Further details can be had from the office of the Executive Engineer, National Highway Division, Chitradurga, and in Government Website: http://eproc.karnataka.gov.in.

P.R. 347 Executive Engineer, NH Dn., Chitradurga.

**ಆಡಳಿತಾಧಿಕಾರಿ, ಅಡ್ವೊಕೇಟ್ ಜನರಲ್‌ರವರ ಕಛೇರಿ, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ : 267 :ಎಜಿ:ಇಎಸ್‌ಟಿ:2008–09, ದಿನಾಂಕ: 20ನೇ ಮಾರ್ಚ್ 2009**

**ನೇಮಕಾತಿ ಸಮಿತಿಗಳ ಜಾಹೀರಾತುಗಳು**

**ಶೀಘ್ರಲಿಪಿಗಾರರು ಮತ್ತು ಬೆರಳಚ್ಚುಗಾರರ ಹುದ್ದೆಗಳಿಗಾಗಿ ಅರ್ಜಿ ಆಹ್ವಾನ**

ಇಲಾಖಾ ವೃಂದ ಮತ್ತು ನೇಮಕಾತಿ ನಿಯಮಾನುಸಾರ ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ಹುದ್ದೆಗಳ ಭರ್ತಿಗಾಗಿ ಅರ್ಹತೆಯುಳ್ಳ ಅಭ್ಯರ್ಥಿಗಳಿಂದ ನಿಗದಿಪಡಿಸಿದ ಅರ್ಜಿ ನಮೂನೆ-1 ರಲ್ಲಿ ಅರ್ಜಿಗಳನ್ನು ದ್ವಿಪ್ರತಿಯಲ್ಲಿ ಆಹ್ವಾನಿಸಲಾಗಿದೆ.

**ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ: 30–06–2009**

ಅರ್ಜಿಗಳನ್ನು ಸಲ್ಲಿಸಬೇಕಾದ ವಿಳಾಸ: ಆಡಳಿತಾಧಿಕಾರಿ
ಅಡ್ವೊಕೇಟ್ ಜನರಲ್ ರವರ ಕಛೇರಿ,
ಉಚ್ಚ ನ್ಯಾಯಾಲಯದ ಕಟ್ಟಡ, ಬೆಂಗಳೂರು – 560 001.

ಶೀಘ್ರಲಿಪಿಗಾರರ ವೇತನ ಶ್ರೇಣಿ ರೂ. 8000–200–8600–225–9500–250–10500–300–12300–350–14400–400–14800

ಬೆರಳಚ್ಚುಗಾರರ ವೇತನ ಶ್ರೇಣಿ ರೂ. 5800–100–6000–125–6500–150–7000–175–7800–200–8400–225–9500–250–10500.

**ವರ್ಗೀಕರಣ**

| ಹುದ್ದೆಗಳ ಪದನಾಮ | ಪ್ರ.ವರ್ಗ–1 | ಸಾ.ಅ. | ಪ.ಜಾ. (ಎಸ್.ಸಿ.) | ಪ್ರವರ್ಗ–2ಎ | ಪ್ರವರ್ಗ–2ಬಿ |
|---|---|---|---|---|---|
| ಶೀಘ್ರಲಿಪಿಗಾರರು | ಪ್ರವರ್ಗ–1 | ಸಾ.ಅ–2 (ಮಹಿಳೆ)<br>ಸಾ.ಅ–1 (ಗ್ರಾ.ಅ.)<br>ಸಾ.ಅ–1 | ಪ.ಜಾ.1 (ಗ್ರಾ.ಅ.) | ಪ್ರವರ್ಗ–2ಎ–1 | ಪ್ರವರ್ಗ–2ಬಿ–1 |
| **ಒಟ್ಟು** | **01** | **04** | **01** | **01** | **01** |

**ವರ್ಗೀಕರಣ**

| ಹುದ್ದೆಗಳ ಪದನಾಮ | ಪ.ಜಾ. (ಎಸ್.ಸಿ.) | ಸಾ.ಅ. | ಪ್ರವರ್ಗ–2ಎ | ಪ್ರವರ್ಗ–2ಬಿ |
|---|---|---|---|---|
| ಬೆರಳಚ್ಚುಗಾರರು | ಪ.ಜಾ–1 (ಮಹಿಳೆ)<br>ಪ.ಜಾ–1 (ಗ್ರಾ.ಅ.) | ಸಾ.ಅ–2 (ಗ್ರಾ.ಅ.)<br>ಸಾ.ಅ–2<br>ಸಾ.ಅ–1 (ಮಹಿಳೆ) | ಪ್ರವರ್ಗ–2ಎ–1 (ಮಹಿಳೆ)<br>ಪ್ರವರ್ಗ–2ಎ–1 | ಪ್ರವರ್ಗ–2ಬಿ–1 |
| **ಒಟ್ಟು** | **02** | **05** | **02** | **01** |

**ಶೀಘ್ರಲಿಪಿಗಾರರ ಹುದ್ದೆಗೆ ವಿದ್ಯಾರ್ಹತೆಗಳು:**

1. ಎಸ್.ಎಸ್.ಎಲ್.ಸಿ., ಅಥವಾ ತತ್ಸಮಾನ ವಿದ್ಯಾರ್ಹತೆ.
2. ಆಂಗ್ಲ ಮತ್ತು ಕನ್ನಡ ಬೆರಳಚ್ಚು ಮತ್ತು ಶೀಘ್ರಲಿಪಿ ಪ್ರೌಢ ದರ್ಜೆ ಅಥವಾ ತತ್ಸಮಾನ ವಿದ್ಯಾರ್ಹತೆ.
3. ಕಂಪ್ಯೂಟರ್ ವಿದ್ಯಾರ್ಹತೆ ಇರುವ ಅಭ್ಯರ್ಥಿಗಳಿಗೆ ಆದ್ಯತೆ ನೀಡಲಾಗುವುದು.

**ಬೆರಳಚ್ಚುಗಾರರ ಹುದ್ದೆಗೆ ವಿದ್ಯಾರ್ಹತೆಗಳು**

1. ಎಸ್.ಎಸ್.ಎಲ್.ಸಿ., ಅಥವಾ ತತ್ಸಮಾನ ವಿದ್ಯಾರ್ಹತೆ.
2. ಆಂಗ್ಲ ಮತ್ತು ಕನ್ನಡ ಬೆರಳಚ್ಚು ಪ್ರೌಢ ದರ್ಜೆ ಅಥವಾ ತತ್ಸಮಾನ ವಿದ್ಯಾರ್ಹತೆ.
3. ಕಂಪ್ಯೂಟರ್ ವಿದ್ಯಾರ್ಹತೆ ಇರುವ ಅಭ್ಯರ್ಥಿಗಳಿಗೆ ಆದ್ಯತೆ ನೀಡಲಾಗುವುದು.

**ವಯೋಮಿತಿ:**

ಅರ್ಜಿ ಸಲ್ಲಿಸಿರುವ ಕೊನೆಯ ದಿನಾಂಕದಂದು ಕನಿಷ್ಠ 18 ವರ್ಷಗಳು ತುಂಬಿರಬೇಕು, ಮತ್ತು ಈ ಕೆಳಕಂಡ ಗರಿಷ್ಠ ವಯೋಮಿತಿಯನ್ನು ಮೀರಿರಬಾರದು.

1) ಪರಿಶಿಷ್ಟ ಜಾತಿ : ಪರಿಶಿಷ್ಟ ಪಂಗಡ: ಪ್ರವರ್ಗ–1 – 38 ವರ್ಷಗಳು.
2) ಸಾಮಾನ್ಯ ವರ್ಗ – 33 ವರ್ಷಗಳು
3) ಇತರೆ ಹಿಂದುಳಿದ ವರ್ಗಗಳು – 36 ವರ್ಷಗಳು

**ಟಿಪ್ಪಣಿ**

1. ನಿಗದಿತ ಅರ್ಜಿ ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ಆಯ್ಕೆ ನೇಮಕಾತಿಗಾಗಿ ಅರ್ಜಿ ನಮೂನೆ (ಭಾಗ–1), ಸರ್ಕಾರಿ ಸೇವಾ ಪುಸ್ತಕದ ಮಳಿಗೆ: ಸೆಂಟ್ರಲ್ ಬುಕ್ ಡಿಪೋ : ಅಂಗೀಕೃತ ಮಾರಾಟಗಾರರಲ್ಲಿ ದೊರೆಯುತ್ತದೆ.
2. ಅರ್ಜಿಯೊಂದಿಗೆ ರೂ. (5–00) ಐದು ರೂಪಾಯಿಯ ಪೋಸ್ಟಲ್ ಆರ್ಡರನ್ನು ಆಡಳಿತಾಧಿಕಾರಿ, ಅಡ್ವೋಕೇಟ್ ಜನರಲ್‌ರವರ ಕಛೇರಿ, ಉಚ್ಚ ನ್ಯಾಯಾಲಯದ ಕಟ್ಟಡ, ಬೆಂಗಳೂರು – 560 001, ಇವರ ಹೆಸರಿನಲ್ಲಿ ಪಡೆದು ಲಗತ್ತಿಸತಕ್ಕದ್ದು. (ಈ ಅಧಿಸೂಚನೆಯ ದಿನಾಂಕದ ಹಿಂದಿನ ಹದಿನೈದು ದಿವಸಗಳೊಳಗಾಗಿ ಪಡೆದ ಪೋಸ್ಟಲ್ ಆರ್ಡರ್ ಮಾತ್ರ ಲಗತ್ತಿಸತಕ್ಕದ್ದು. ತೀರಾ ಹಳೆಯ ದಿನಾಂಕದ ಪೋಸ್ಟಲ್ ಆರ್ಡರ್‌ಗಳನ್ನು ಲಗತ್ತಿಸಬಾರದು.) ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಹಾಗೂ ಪ್ರವರ್ಗ – 1 ಕ್ಕೆ ಸೇರಿದವರಿಗೆ ವಿನಾಯಿತಿ ಇದೆ.
3. ಅರ್ಜಿ ಭರ್ತಿ ಮಾಡುವಾಗ ಅಭ್ಯರ್ಥಿಗಳು ನೀಡುವ ವಿವರಗಳು ತಪ್ಪಿರಬಾರದು ಮತ್ತು ಯಾವ ವಿವರಗಳನ್ನು ಮುಚ್ಚಿಡಬಾರದು, ಅರ್ಜಿ ಜೊತೆಗೆ ಲಗತ್ತಿಸಲಾದ ದಾಖಲೆಗಳಲ್ಲಿ ನೀಡಲಾದ ವಿವರಗಳನ್ನು ತಿದ್ದಬಾರದು ಅಥವಾ ಬದಲಾಯಿಸಬಾರದು.
4. ಅಭ್ಯರ್ಥಿಗಳ ನೇಮಕಾತಿ ಮಾಡುವಾಗ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 08 ಸಹಿಮ 95, ದಿನಾಂಕ: 20ನೇ ಜೂನ್ 1995 ರಂತೆ, ಮತ್ತು ಸಿಆಸುಇ 97 ಸೇನೆನಿ 2002, ದಿನಾಂಕ:22.11.2002 ರಂತೆ, ಮೀಸಲಾತಿ ನಿಯಮಗಳನ್ನು ಅನುಸರಿಸಲಾಗುವುದು.
5. ಅಪೂರ್ಣವಾದ, ಲಗತ್ತುಗಳಿಲ್ಲದ ಮತ್ತು ಕೊನೆಯ ದಿನಾಂಕ ಮುಗಿದ ನಂತರ ಬಂದ ಅರ್ಜಿಗಳನ್ನು ಸೂಚನೆಯಿಲ್ಲದೆ ತಿರಸ್ಕರಿಸಲಾಗುವುದು.

**ಅರ್ಜಿಯೊಂದಿಗೆ ಲಗತ್ತಿಸಬೇಕಾದ ದಾಖಲೆಗಳು**

1. ಸದರಿ ಹುದ್ದೆಗೆ ಕೇಳಿರುವ ವಿದ್ಯಾರ್ಹತೆಗೆ ಸಂಬಂಧಪಟ್ಟಂತೆ (ದ್ವಿಪ್ರತಿಯಲ್ಲಿ) ಅಂಕಪಟ್ಟಿಗಳು.
2. ಪರಿಶಿಷ್ಟ ಜಾತಿ : ಪರಿಶಿಷ್ಟ ಪಂಗಡಕ್ಕೆ ಮತ್ತು ಇತರೆ ಪ್ರವರ್ಗಕ್ಕೆ ಸೇರಿದ ಅಭ್ಯರ್ಥಿಗಳು ತಮ್ಮ ಜಾತಿ ಪ್ರಮಾಣ ಪತ್ರದ ಪ್ರತಿಗಳನ್ನು ಲಗತ್ತಿಸಬೇಕು.

**ವಿಶೇಷ ಸೂಚನೆಗಳು**

1. ಆಯ್ಕೆಯಾದ ಅಭ್ಯರ್ಥಿಗಳು ಗುಲ್ಬರ್ಗ : ಧಾರವಾಡ : ಕೆ.ಎ.ಟಿ. ಘಟಕ ಬೆಂಗಳೂರು, ಇಲ್ಲಿ ಕೆಲಸ ನಿರ್ವಹಿಸತಕ್ಕದ್ದು.
2. ಸರ್ಕಾರಿ ಇಲಾಖೆಗಳಲ್ಲಿ ಅಥವಾ ಇತರ ಸಂಸ್ಥೆಗಳಲ್ಲಿ ಈಗಾಗಲೇ ಕೆಲಸ ಮಾಡುತ್ತಿರುವವರು ತಮ್ಮ ಮೇಲಾಧಿಕಾರಿಗಳ ಮೂಲಕ ಅರ್ಜಿ ಸಲ್ಲಿಸಬೇಕು.
3. ಅರ್ಜಿಗಳನ್ನು ಹೊಂದಿದ ಲಕೋಟೆಯ ಮೇಲೆ "ಅಡ್ವೋಕೇಟ್ ಜನರಲ್‌ರವರ ಇಲಾಖೆಯಲ್ಲಿ ಬೆರಳಚ್ಚುಗಾರರ : ಶೀಘ್ರಲಿಪಿಗಾರರ ಹುದ್ದೆಗೆ ಅರ್ಜಿ" ಎಂದು ನಮೂದಿಸತಕ್ಕದ್ದು.

**ಎಂ. ಕೃಷ್ಣಪ್ಪ**
ಆಡಳಿತಾಧಿಕಾರಿ,
ಅಡ್ವೋಕೇಟ್ ಜನರಲ್ ರವರ ಕಛೇರಿ, ಉಚ್ಚ ನ್ಯಾಯಾಲಯದ ಕಟ್ಟಡ,
ಬೆಂಗಳೂರು – 560 001.

ಪಿ.ಆರ್. 350

## ಅರಣ್ಯ ಇಲಾಖೆ

## ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ವಿಭಾಗ, ರಾಮನಗರ ನೆಡುತೋಪು ನಿರ್ಮಾಣ ಮತ್ತು ಸಸಿ ಬೆಳೆಸುವುದು ಹಾಗೂ ಮಾನ್‌ಸೂನ್ ಕಾಮಗಾರಿ ಕೈಗೊಳ್ಳುವುದರ ಬಗ್ಗೆ ಟೆಂಡರ್

## ಸಂಕ್ಷಿಪ್ತ ಟೆಂಡರ್ ಪ್ರಕಟಣೆ

**ಎ2.ಬಿಯುಡಿ–ಉಅಸಂ, ಅಕಾಟೆ–ಸಿಆರ್.4/ 2009–10. ದಿನಾಂಕ: 16ನೇ ಮೇ 2009**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ 2009-10 ನೇ ಸಾಲಿಗೆ 2009 ರ ಮಳೆಗಾಲದಲ್ಲಿ ವಿವಿಧ ಯೋಜನೆಗಳಡಿಯಲ್ಲಿ ಈ ಕೆಳಗೆ ನಮೂದಿಸಿರುವ ಕಾಮಗಾರಿ ಕೈಗೊಳ್ಳಲು ನೋಂದಾಯಿತ ಅರಣ್ಯ ಗುತ್ತಿಗೆದಾರರಿಂದ ಟೆಂಡರ್ ಕರೆಯಲಾಗಿದೆ.

ದಿನಾಂಕ 30-05-2009 ಅಪರಾಹ್ನ 3.00 ಗಂಟೆಯೊಳಗೆ ಮೊಹರು ಮಾಡಿದ ಟೆಂಡರ್ ಸಲ್ಲಿಸುವುದು ಅದೇ ದಿನ ಕೆಳಗೆ ಸಹಿ ಮಾಡಿದವರ ಅಥವಾ ಇವರಿಂದ ಅಧಿಕೃತವಾಗಿ ನೇಮಿಸಲ್ಪಟ್ಟವರು ಸದರಿ ದಿನಾಂಕದಂದು ಟೆಂಡರ್‌ದಾರರ ಸಮ್ಮುಖದಲ್ಲಿ ಟೆಂಡರ್ ಲಕೋಟೆಯನ್ನು ಅಪರಾಹ್ನ 4.00 ಗಂಟೆಗೆ ತೆಗೆಯಲಾಗುವುದು ಮತ್ತು ಸದರಿ ದಿನಾಂಕದಂದು ಯಾವುದೇ ಟೆಂಡರ್ ಬಾರದಿದ್ದರೆ ಅಥವಾ ಕಾರಣಾಂತರಗಳಿಂದ ಟೆಂಡರ್ ನಡೆಯದೆ ಇದ್ದಲ್ಲಿ ಇದೇ ಪ್ರಕಟಣೆಯ ಷರತ್ತಿಗೆ

ಒಳಪಟ್ಟು ದಿನಾಂಕ 06-06-2009 ರಂದು ಅಪರಾಹ್ನ 3.00 ಗಂಟೆಗೆ ಎರಡನೇ ಬಾರಿಗೆ ನೋಂದಾಯಿತ ಇಚ್ಛೆಯುಳ್ಳ ಅರಣ್ಯ ಗುತ್ತಿಗೆದಾರರಿಂದ ಭರ್ತಿ ಮಾಡಿದ ಟೆಂಡರ್‌ಗಳನ್ನು ಸ್ವೀಕೃತಿ ಮಾಡಲಾಗುವುದು ಮತ್ತು ಟೆಂಡರ್ ಲಕೋಟೆಯನ್ನು ಅದೇ ದಿನ 4.00 ಗಂಟೆಗೆ ತೆರೆಯಲಾಗುವುದು. ಈ ಬಗ್ಗೆ ಮತ್ತೆ ಪ್ರತ್ಯೇಕ ಪ್ರಕಟಣೆ ಹೊರಡಿಸಲಾಗುವುದಿಲ್ಲ.

| ಕ್ರ. ಸಂ. | ವಲಯದ ಹೆಸರು | ಸ್ಥಳದ ಹೆಸರು | ಕಾಮಗಾರಿಯ ವಿವರ | ಭೌತಿಕ (ಹೆ.ಗಳಲ್ಲಿ) | ಟೆಂಡರ್ ಅಂದಾಜು ಮೊತ್ತ (ರೂ. ಗಳಲ್ಲಿ) | ಇ.ಎಂ.ಡಿ ಮೊತ್ತ (ರೂ.ಗಳಲ್ಲಿ) | ಕಾಮಗಾರಿ ಪೂರೈಸ ಬೇಕಾದ ದಿನಾಂಕ |
|---|---|---|---|---|---|---|---|
| 1 | ಚನ್ನಪಟ್ಟಣ | ಕೊಂಬಿನಕಲ್ಲು ಎಸ್.ಎಫ್. | ನೆಡುತೋಪು ನಿರ್ಮಾಣ | 25 | 1,00,900–00 | 10,090–00 | 31–08–2009 |
| 2 | ಚನ್ನಪಟ್ಟಣ | ಕೊಂಬಿನಕಲ್ಲು ಎಸ್.ಎಫ್. | ನೆಡುತೋಪು ನಿರ್ಮಾಣ | 25 | 1,00,900–00 | 10,090–00 | 31–08–2009 |
| 3 | ಚನ್ನಪಟ್ಟಣ | ತೈಲೂರು ಎಸ್.ಎಫ್ | ನೆಡುತೋಪು ನಿರ್ಮಾಣ | 25 | 1,00,900–00 | 10,090–00 | 31–08–2009 |
| 4 | ಚನ್ನಪಟ್ಟಣ | ತೈಲೂರು ಎಸ್.ಎಫ್ | ನೆಡುತೋಪು ನಿರ್ಮಾಣ | 25 | 1,00,900–00 | 10,090–00 | 31–08–2009 |
| 5 | ಚನ್ನಪಟ್ಟಣ | ನರಿಕಲ್ಲುಗುಡ್ಡ ಎಸ್.ಎಫ್. | ನೆಡುತೋಪು ನಿರ್ಮಾಣ | 25 | 1,00,900–00 | 10,090–00 | 31–08–2009 |
| 6 | ಚನ್ನಪಟ್ಟಣ | ನರಿಕಲ್ಲುಗುಡ್ಡ ಎಸ್.ಎಫ್. | ನೆಡುತೋಪು ನಿರ್ಮಾಣ | 25 | 1,00,900–00 | 10,090–00 | 31–08–2009 |
| 7 | ಕನಕಪುರ | ಬಿಳಿಕಲ್ಲು ಎಸ್.ಎಫ್ | ನೆಡುತೋಪು ನಿರ್ಮಾಣ | 25 | 1,00,900–00 | 10,090–00 | 31–08–2009 |
| 8 | ಕನಕಪುರ | ಬಿಳಿಕಲ್ಲು ಎಸ್.ಎಫ್ | ನೆಡುತೋಪು ನಿರ್ಮಾಣ | 25 | 1,00,900–00 | 10,090–00 | 31–08–2009 |
| 9 | ಕನಕಪುರ | ಮುಗ್ಗೂರು ಎಸ್.ಎಫ್ | ನೆಡುತೋಪು ನಿರ್ಮಾಣ | 25 | 1,00,900–00 | 10,090–00 | 31–08–2009 |
| 10 | ಕನಕಪುರ | ಮುಗ್ಗೂರು ಎಸ್.ಎಫ್ | ನೆಡುತೋಪು ನಿರ್ಮಾಣ | 25 | 1,00,900–00 | 10,090–00 | 31–08–2009 |
| 11 | ಕನಕಪುರ | ಗಂಗಾಧರನಗುಡ್ಡೆ ಎಸ್.ಎಫ್ | ನೆಡುತೋಪು ನಿರ್ಮಾಣ | 25 | 1,00,900–00 | 10,090–00 | 31–08–2009 |
| 12 | ಕನಕಪುರ | ಬಿಳಿಕಲ್ ಎಸ್.ಎಫ್ | ನೆಡುತೋಪು ನಿರ್ಮಾಣ | 25 | 1,00,900–00 | 10,090–00 | 31–08–2009 |
| 13 | ಮಾಗಡಿ | ಸಿದ್ದದೇವರಬೆಟ್ಟ ಎಸ್.ಎಫ್. | ನೆಡುತೋಪು ನಿರ್ಮಾಣ | 25 | 1,00,900–00 | 10,090–00 | 31–08–2009 |
| 14 | ಮಾಗಡಿ | ಸಿದ್ದದೇವರಬೆಟ್ಟ ಎಸ್.ಎಫ್. | ನೆಡುತೋಪು ನಿರ್ಮಾಣ | 25 | 1,00,900–00 | 10,090–00 | 31–08–2009 |
| 15 | ಮಾಗಡಿ | ಸಿದ್ದದೇವರಬೆಟ್ಟ ಎಸ್.ಎಫ್. | ನೆಡುತೋಪು ನಿರ್ಮಾಣ | 25 | 1,00,900–00 | 10,090–00 | 31–08–2009 |
| 16 | ಮಾಗಡಿ | ಸಿದ್ದದೇವರಬೆಟ್ಟ ಎಸ್.ಎಫ್. | ನೆಡುತೋಪು ನಿರ್ಮಾಣ | 25 | 1,00,900–00 | 10,090–00 | 31–08–2009 |
| 17 | ಮಾಗಡಿ | ಸಿದ್ದದೇವರಬೆಟ್ಟ ಎಸ್.ಎಫ್. | ನೆಡುತೋಪು ನಿರ್ಮಾಣ | 25 | 1,00,900–00 | 10,090–00 | 31–08–2009 |
| 18 | ಚನ್ನಪಟ್ಟಣ | ಚಿಕ್ಕಮಣ್ಣುಗುಡ್ಡೆ ಎಸ್.ಎಫ್. | ನೆಡುತೋಪು ನಿರ್ಮಾಣ | 25 | 2,52,600–00 | 25,260–00 | 31–08–2009 |

| ಕ್ರ. ಸಂ. | ವಲಯದ ಹೆಸರು | ಸ್ಥಳದ ಹೆಸರು | ಕಾಮಗಾರಿಯ ವಿವರ | ಭೌತಿಕ (ಹೆ.ಗಳಲ್ಲಿ) | ಟೆಂಡರ್ ಅಂದಾಜು ಮೊತ್ತ (ರೂ. ಗಳಲ್ಲಿ) | ಇ.ಎಂ.ಡಿ ಮೊತ್ತ (ರೂ.ಗಳಲ್ಲಿ) | ಕಾಮಗಾರಿ ಪೂರೈಸ ಬೇಕಾದ ದಿನಾಂಕ |
|---|---|---|---|---|---|---|---|
| 19 | ಚನ್ನಪಟ್ಟಣ | ಚಿಕ್ಕಮಣ್ಣುಗುಡ್ಡೆ ಎಸ್.ಎಫ್. | ನೆಡುತೋಪು ನಿರ್ಮಾಣ | 25 | 2,52,600–00 | 25,260–00 | 31–08–2009 |
| 20 | ಚನ್ನಪಟ್ಟಣ | ಚಿಕ್ಕಮಣ್ಣುಗುಡ್ಡೆ ಎಸ್.ಎಫ್. | ನೆಡುತೋಪು ನಿರ್ಮಾಣ | 25 | 2,52,600–00 | 25,260–00 | 31–08–2009 |
| 21 | ಸಾತನೂರು | ಚೀಲಾಂದವಾಡಿ ಎಸ್.ಎಫ್. | ನೆಡುತೋಪು ನಿರ್ಮಾಣ | 25 | 2,52,600–00 | 25,260–00 | 31–08–2009 |
| 22 | ರಾಮನಗರ | ಹುಲ್ತಾರ್ ಎಸ್.ಎಫ್. | ನೆಡುತೋಪು ನಿರ್ಮಾಣ | 25 | 2,52,600–00 | 25,260–00 | 31–08–2009 |
| 23 | ರಾಮನಗರ | ಹಂದಿಗುಂದಿ ಎಸ್.ಎಫ್. | ನೆಡುತೋಪು ನಿರ್ಮಾಣ | 25 | 2,52,600–00 | 25,260–00 | 31–08–2009 |
| 24 | ಮಾಗಡಿ | ಸಿದ್ದದೇವರಬೆಟ್ಟ ಎಸ್.ಎಫ್. | ನೆಡುತೋಪು ನಿರ್ಮಾಣ | 25 | 2,52,600–00 | 25,260–00 | 31–08–2009 |
| 25 | ಮಾಗಡಿ | ಸಿದ್ದದೇವರಬೆಟ್ಟ ಎಸ್.ಎಫ್. | ನೆಡುತೋಪು ನಿರ್ಮಾಣ | 25 | 2,52,600–00 | 25,260–00 | 31–08–2009 |
| 26 | ಮಾಗಡಿ | ಸಿದ್ದದೇವರಬೆಟ್ಟ ಎಸ್.ಎಫ್. | ನೆಡುತೋಪು ನಿರ್ಮಾಣ | 25 | 2,52,600–00 | 25,260–00 | 31–08–2009 |
| 27 | ಮಾಗಡಿ | ಸಿದ್ದದೇವರಬೆಟ್ಟ ಎಸ್.ಎಫ್. | ನೆಡುತೋಪು ನಿರ್ಮಾಣ | 20 | 2,02,800–00 | 20,280–00 | 31–08–2009 |
| 28 | ಮಾಗಡಿ | ಗಟ್ಟಿಪುರ ಎಸ್.ಎಫ್. | ನೆಡುತೋಪು ನಿರ್ಮಾಣ | 25 | 1,74,650–00 | 17,465–00 | 31–08–2009 |
| 29 | ಚನ್ನಪಟ್ಟಣ | ಕಬ್ಬಾಳ್ ಎಸ್.ಎಫ್. | ನೆಡುತೋಪು ನಿರ್ಮಾಣ | 25 | 1,74,650–00 | 17,465–00 | 31–08–2009 |
| 30 | ಚನ್ನಪಟ್ಟಣ | ತೆಂಗಿನಕಲ್ಲು ಎಸ್.ಎಫ್. | ನೆಡುತೋಪು ನಿರ್ಮಾಣ | 25 | 1,74,650–00 | 17,465–00 | 31–08–2009 |
| 31 | ಚನ್ನಪಟ್ಟಣ | ತೆಂಗಿನಕಲ್ಲು ಎಸ್.ಎಫ್. | ನೆಡುತೋಪು ನಿರ್ಮಾಣ | 25 | 1,74,650–00 | 17,465–00 | 31–08–2009 |
| 32 | ಕನಕಪುರ | ಗಂಗಾಧರನಗುಡ್ಡೆ ಎಸ್.ಎಫ್ | ನೆಡುತೋಪು ನಿರ್ಮಾಣ | 25 | 1,74,650–00 | 17,465–00 | 31–08–2009 |
| 33 | ಸಾತನೂರು | ಚೀಲಾಂದವಾಡಿ ಎಸ್.ಎಫ್. | ನೆಡುತೋಪು ನಿರ್ಮಾಣ | 25 | 1,74,650–00 | 17,465–00 | 31–08–2009 |
| 34 | ಕನಕಪುರ | ಬಿಳಿಕಲ್ಲು ಎಸ್.ಎಫ್ | ನೆಡುತೋಪು ನಿರ್ಮಾಣ | 25 | 1,74,750–00 | 17,475–00 | 31–09–2009 |
| 35 | ಕನಕಪುರ | ಮುಗ್ಗೂರು ಎಸ್.ಎಫ್ | ಮಾನ್‌ಸೂನ್ ಕಾಮಗಾರಿ | 25 | 1,74,750–00 | 17,475–00 | 31–09–2009 |
| 36 | ಕನಕಪುರ | ಗಂಗಾಧರನಗುಡ್ಡೆ ಎಸ್.ಎಫ್ | ಮಾನ್‌ಸೂನ್ ಕಾಮಗಾರಿ | 50 | 3,49,500–00 | 34,950–00 | 31–09–2009 |
| 37 | ಸಾತನೂರು | ಚೀಲಾಂದವಾಡಿ ಎಸ್.ಎಫ್. | ಮಾನ್‌ಸೂನ್ ಕಾಮಗಾರಿ | 50 | 3,49,500–00 | 34,950–00 | 31–09–2009 |
| 38 | ಮಾಗಡಿ | ಸಿದ್ದದೇವರಬೆಟ್ಟ ಎಸ್.ಎಫ್. | ಮಾನ್‌ಸೂನ್ ಕಾಮಗಾರಿ | 50 | 3,49,500–00 | 34,950–00 | 31–09–2009 |

| ಕ್ರ. ಸಂ. | ವಲಯದ ಹೆಸರು | ಸ್ಥಳದ ಹೆಸರು | ಕಾಮಗಾರಿಯ ವಿವರ | ಭೌತಿಕ (ಹೆ.ಗಳಲ್ಲಿ) | ಟೆಂಡರ್ ಅಂದಾಜು ಮೊತ್ತ (ರೂ. ಗಳಲ್ಲಿ) | ಇ.ಎಂ.ಡಿ ಮೊತ್ತ (ರೂ.ಗಳಲ್ಲಿ) | ಕಾಮಗಾರಿ ಪೂರೈಸ ಬೇಕಾದ ದಿನಾಂಕ |
|---|---|---|---|---|---|---|---|
| 39 | ರಾಮನಗರ | ಹಂದಿಗುಂದಿ ಎಸ್.ಎಫ್. | ಮಾನ್‌ಸೂನ್ ಕಾಮಗಾರಿ | 25 | 1,74,750–00 | 17,475–00 | 31–09–2009 |
| 40 | ರಾಮನಗರ | ಹಂದಿಗುಂದಿ ಎಸ್.ಎಫ್. | ಮಾನ್‌ಸೂನ್ ಕಾಮಗಾರಿ | 25 | 1,74,750–00 | 17,475–00 | 31–09–2009 |

| ಕ್ರ. ಸಂ. | ವಲಯದ ಹೆಸರು | ಸ್ಥಳದ ಹೆಸರು | ಕಾಮಗಾರಿಯ ವಿವರ | ಭೌತಿಕ (ಹೆ.ಗಳಲ್ಲಿ) | ಟೆಂಡರ್ ಅಂದಾಜು ಮೊತ್ತ (ರೂ. ಗಳಲ್ಲಿ) | ಇ.ಎಂ.ಡಿ ಮೊತ್ತ (ರೂ.ಗಳಲ್ಲಿ) | ಕಾಮಗಾರಿ ಪೂರೈಸ ಬೇಕಾದ ದಿನಾಂಕ |
|---|---|---|---|---|---|---|---|
| 1 | ರಾಮನಗರ | ಹಂದಿಗುಂದಿ ಎಸ್.ಎಫ್. | ನೆಡುತೋಪು ನಿರ್ಮಾಣ | 25 | 3,12,500–00 | 31,250–00 | 31–08–2009 |

| ಕ್ರ. ಸಂ. | ವಲಯದ ಹೆಸರು | ಸ್ಥಳದ ಹೆಸರು | ಕಾಮಗಾರಿಯ ವಿವರ | ಭೌತಿಕ (ಹೆ.ಗಳಲ್ಲಿ) | ಟೆಂಡರ್ ಅಂದಾಜು ಮೊತ್ತ (ರೂ. ಗಳಲ್ಲಿ) | ಇ.ಎಂ.ಡಿ ಮೊತ್ತ (ರೂ.ಗಳಲ್ಲಿ) | ಕಾಮಗಾರಿ ಪೂರೈಸ ಬೇಕಾದ ದಿನಾಂಕ |
|---|---|---|---|---|---|---|---|
| 1 | ಮಾಗಡಿ | ಸಿದ್ದದೇವರಬೆಟ್ಟ ಎಸ್.ಎಫ್ | ನೆಡುತೋಪು ನಿರ್ಮಾಣ | 20 | 2,50,000–00 | 25,000–00 | 31–08–2009 |
| 2 | ಮಾಗಡಿ | ಸಿದ್ದದೇವರಬೆಟ್ಟ ಎಸ್.ಎಫ್ | ನೆಡುತೋಪು ನಿರ್ಮಾಣ | 19.5 | 2,43,750–00 | 24,375–00 | 31–08–2009 |
| 3 | ಮಾಗಡಿ | ಚಕ್ರಭಾವಿ ಎಂ.ಎಫ್ | ನೆಡುತೋಪು ನಿರ್ಮಾಣ | 20 | 2,50,000–00 | 25,000–00 | 31–08–2009 |
| 4 | ಮಾಗಡಿ | ಚಕ್ರಭಾವಿ ಎಂ.ಎಫ್ | ನೆಡುತೋಪು ನಿರ್ಮಾಣ | 20 | 2,50,000–00 | 25,000–00 | 31–08–2009 |
| 5 | ಮಾಗಡಿ | ಚಕ್ರಭಾವಿ ಎಂ.ಎಫ್ | ನೆಡುತೋಪು ನಿರ್ಮಾಣ | 25 | 3,12,500–00 | 31,250–00 | 31–08–2009 |
| 6 | ಮಾಗಡಿ | ಚಕ್ರಭಾವಿ ಎಂ.ಎಫ್ | ನೆಡುತೋಪು ನಿರ್ಮಾಣ | 25 | 3,12,500–00 | 31,250–00 | 31–08–2009 |
| 7 | ರಾಮನಗರ | ಹುಲ್ತಾರ್ ಎಸ್.ಎಫ್. | ನೆಡುತೋಪು ನಿರ್ಮಾಣ | 20 | 2,50,000–00 | 25,000–00 | 31–08–2009 |

| ಕ್ರ. ಸಂ. | ವಲಯದ ಹೆಸರು | ಸ್ಥಳದ ಹೆಸರು | ಕಾಮಗಾರಿಯ ವಿವರ | ಭೌತಿಕ (ಕಿ.ಮೀ. ಗಳಲ್ಲಿ) | ಟೆಂಡರ್ ಅಂದಾಜು ಮೊತ್ತ (ರೂ. ಗಳಲ್ಲಿ) | ಇ.ಎಂ.ಡಿ ಮೊತ್ತ (ರೂ.ಗಳಲ್ಲಿ) | ಕಾಮಗಾರಿ ಪೂರೈಸಬೇಕಾದ ದಿನಾಂಕ |
|---|---|---|---|---|---|---|---|
| 1 | ರಾಮನಗರ | ರಾಮನಗರ – ಮೈಸೂರು ರಸ್ತೆ ಬದಿ | ರಸ್ತೆ ಬದಿ ನೆಡುತೋಪು ನಿರ್ಮಾಣ | 18 | 3,18,960–00 | 31,896–00 | 31–08–2009 |
| 2 | ಚನ್ನಪಟ್ಟಣ | ಚನ್ನಪಟ್ಟಣ – ಮೈಸೂರು ರಸ್ತೆ ಬದಿ | ರಸ್ತೆ ಬದಿ ನೆಡುತೋಪು ನಿರ್ಮಾಣ | 18 | 3,18,960–00 | 31,896–00 | 31–08–2009 |

| ಕ್ರ. ಸಂ. | ವಲಯದ ಹೆಸರು | ಸ್ಥಳದ ಹೆಸರು | ಕಾಮಗಾರಿಯ ವಿವರ | ಭೌತಿಕ (ಹೆ.ಗಳಲ್ಲಿ) | ಟೆಂಡರ್ ಅಂದಾಜು ಮೊತ್ತ (ರೂ. ಗಳಲ್ಲಿ) | ಇ.ಎಂ.ಡಿ ಮೊತ್ತ (ರೂ.ಗಳಲ್ಲಿ) | ಕಾಮಗಾರಿ ಪೂರೈಸ ಬೇಕಾದ ದಿನಾಂಕ |
|---|---|---|---|---|---|---|---|
| 1 | ರಾಮನಗರ | ನಗರ ಪ್ರದೇಶ | ನೆಡುತೋಪು ನಿರ್ಮಾಣ | 10 | 2,18,000–00 | 21,800–00 | 31–08–2009 |
| 2 | ಮಾಗಡಿ | ನಗರ ಪ್ರದೇಶ | ನೆಡುತೋಪು ನಿರ್ಮಾಣ | 10 | 2,18,000–00 | 21,800–00 | 31–08–2009 |
| 3 | ಚನ್ನಪಟ್ಟಣ | ನಗರ ಪ್ರದೇಶ | ನೆಡುತೋಪು ನಿರ್ಮಾಣ | 10 | 2,18,000–00 | 21,800–00 | 31–08–2009 |
| 4 | ಕನಕಪುರ | ನಗರ ಪ್ರದೇಶ | ನೆಡುತೋಪು ನಿರ್ಮಾಣ | 10 | 2,18,000–00 | 21,800–00 | 31–08–2009 |
| 5 | ಸಾತನೂರು | ನಗರ ಪ್ರದೇಶ | ನೆಡುತೋಪು ನಿರ್ಮಾಣ | 10 | 2,18,000–00 | 21,800–00 | 31–08–2009 |

| ಕ್ರ. ಸಂ. | ವಲಯದ ಹೆಸರು | ಸ್ಥಳದ ಹೆಸರು | ಕಾಮಗಾರಿಯ ವಿವರ | ಭೌತಿಕ (ಕಿ.ಮಿ. ಗಳಲ್ಲಿ) | ಟೆಂಡರ್ ಅಂದಾಜು ಮೊತ್ತ (ರೂ. ಗಳಲ್ಲಿ) | ಇ.ಎಂ.ಡಿ ಮೊತ್ತ (ರೂ.ಗಳಲ್ಲಿ) | ಕಾಮಗಾರಿ ಪೂರೈಸ ಬೇಕಾದ ದಿನಾಂಕ |
|---|---|---|---|---|---|---|---|
| 1 | ಕನಕಪುರ | ಮಂಜುನಾಥ ಎಸ್.ಎಫ್ – (ಕೊಳಕೊಂಡನಹಳ್ಳಿ) | ಆನೆ ನಿರೋಧಕ ಕಂದಕ | 2 | 2,80,000–00 | 28,000–00 | 31–08–2009 |
| 2 | ಕನಕಪುರ | ಮಂಜುನಾಥ ಎಸ್.ಎಫ್ – (ವೀರಯ್ಯನದೊಡ್ಡಿ) | ಆನೆ ನಿರೋಧಕ ಕಂದಕ | 2 | 2,80,000–00 | 28,000–00 | 31–08–2009 |
| 3 | ಕನಕಪುರ | ಬಿಳಿಕಲ್ಲು ಎಸ್.ಎಫ್ (ಯರಂದ್ಯಾಪನಹಳ್ಳಿ) | ಆನೆ ನಿರೋಧಕ ಕಂದಕ | 2 | 2,80,000–00 | 28,000–00 | 31–08–2009 |
| 4 | ಕನಕಪುರ | ಬಿಳಿಕಲ್ಲು ಎಸ್.ಎಫ್ (ಕಾಡುಶಿವನಹಳ್ಳಿ) | ಆನೆ ನಿರೋಧಕ ಕಂದಕ | 2 | 2,80,000–00 | 28,000–00 | 31–08–2009 |
| 5 | ಕನಕಪುರ | ಬಿಳಿಕಲ್ಲು ಎಸ್.ಎಫ್ (ನಾಯಕಲ್ಲುದೊಡ್ಡಿ) | ಆನೆ ನಿರೋಧಕ ಕಂದಕ | 2 | 2,80,000–00 | 28,000–00 | 31–08–2009 |
| 6 | ಸಾತನೂರು | ಚಿಲಾಂದವಾಡಿ ಎಸ್.ಎಫ್ (ವೆಂಕಟೇಗೌಡನದೊಡ್ಡಿ) | ಆನೆ ನಿರೋಧಕ ಕಂದಕ | 2 | 2,80,000–00 | 28,000–00 | 31–08–2009 |
| 7 | ಸಾತನೂರು | ಚಿಲಾಂದವಾಡಿ ಎಸ್.ಎಫ್ (ಉಯ್ಯಂಬಳ್ಳಿ) | ಆನೆ ನಿರೋಧಕ ಕಂದಕ | 2 | 2,80,000–00 | 28,000–00 | 31–08–2009 |
| 8 | ಚನ್ನಪಟ್ಟಣ | ಕಬ್ಬಾಳು ಎಸ್.ಎಫ್ (ಕಬ್ಬಾಳು) | ಆನೆ ನಿರೋಧಕ ಕಂದಕ | 2 | 2,80,000–00 | 28,000–00 | 31–08–2009 |
| 9 | ರಾಮನಗರ | ರಾಮದೇವರಬೆಟ್ಟ – ಬ್ಲಾಕ್ - I | ಎಲ್ ಯಂಗಲ್ ತಂತಿ ಬೇಲಿ ನಿರ್ಮಾಣ (ಎಲ್ ಯಂಗಲ್ ಮತ್ತು ಮುಳ್ಳು ತಂತಿ ಬಿಟ್ಟು) | 400 ಮೀ | 2,00,000–00 | 20,000–00 | 31–08–2009 |

| ಕ್ರ. ಸಂ. | ವಲಯದ ಹೆಸರು | ಸ್ಥಳದ ಹೆಸರು | ಕಾಮಗಾರಿಯ ವಿವರ | ಭೌತಿಕ (ಕಿ.ಮಿ. ಗಳಲ್ಲಿ) | ಟೆಂಡರ್ ಅಂದಾಜು ಮೊತ್ತ (ರೂ. ಗಳಲ್ಲಿ) | ಇ.ಎಂ.ಡಿ ಮೊತ್ತ (ರೂ.ಗಳಲ್ಲಿ) | ಕಾಮಗಾರಿ ಪೂರೈಸ ಬೇಕಾದ ದಿನಾಂಕ |
|---|---|---|---|---|---|---|---|
| 10 | ರಾಮನಗರ | ರಾಮದೇವರಬೆಟ್ಟ – ಬ್ಲಾಕ್ – II | ಎಲ್ ಯಂಗಲ್ ತಂತಿ ಬೇಲಿ ನಿರ್ಮಾಣ (ಎಲ್ ಯಂಗಲ್ ಮತ್ತು ಮುಳ್ಳು ತಂತಿ ಬಿಟ್ಟು) | 400 ಮೀ | 2,00,000–00 | 20,000–00 | 31–08–2009 |

**ನಿಬಂಧನೆಗಳು:–**

1. ಟೆಂಡರ್ ಫಾರಂಗಳನ್ನು ಫಾರಂಗೆ ರೂ. 200–00 ಹಾಗೂ ತೆರಿಗೆ ಪಾವತಿ ಮಾಡಿ ದಿನಾಂಕ 30-05-2009 ಕಛೇರಿ ಕೆಲಸದ ವೇಳೆಯಲ್ಲಿ ಅಪರಾಹ್ನ 1.00 ಗಂಟೆಯವರೆಗೆ ಪಡೆಯಬಹುದು ಮತ್ತು ಟೆಂಡರ್‌ನಲ್ಲಿ ಭಾಗವಹಿಸಲು ಇಚ್ಛೆಯುಳ್ಳವರು ಈ ವಿಭಾಗದಲ್ಲಿ 2009–10 ನೇ ಸಾಲಿಗೆ ತಮ್ಮ ಹೆಸರನ್ನು ಅರಣ್ಯ ಗುತ್ತಿಗೆದಾರರಾಗಿ ನೋಂದಾಯಿಸಿಕೊಳ್ಳಬೇಕು. ತಪ್ಪಿದ್ದಲ್ಲಿ ಅಂತವರ ಟೆಂಡರನ್ನು ಪರಿಗಣಿಸಲಾಗುವುದಿಲ್ಲ.
2. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಪ್ರತಿ ಬ್ಲಾಕ್‌ಗೆ ಸಂಬಂಧಿಸಿದಂತೆ ಪ್ರತ್ಯೇಕವಾದ ಮೊಹರು ಲಕೋಟೆಯಲ್ಲಿ ಪ್ರತ್ಯೇಕವಾಗಿ ಇಎಂಡಿಯೊಂದಿಗೆ ಸಲ್ಲಿಸುವುದು.
3. ಭರ್ತಿ ಮಾಡಿದ ಟೆಂಡರ್ ಫಾರಂ ಅನ್ನು 30-05-2009 ರಂದು ಅಪರಾಹ್ನ 3.00 ಗಂಟೆಯವರೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ವಿಭಾಗ, ರಾಮನಗರ ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಗಳು ಸ್ವೀಕರಿಸುವರು ಮತ್ತು ಮೇಲ್ಕಂಡ ದಿನಾಂಕದಂದು ಯಾವುದೇ ಕಾರಣದಿಂದಾಗಿ ಟೆಂಡರ್ ನಡೆಯದಿದ್ದರೆ ಇದೇ ಪ್ರಕಟಣೆಯ ಷರತ್ತಿಗೆ ಒಳಪಟ್ಟು ಪುನ: ದಿನಾಂಕ 06-06-2009 ರಂದು ಅಪರಾಹ್ನ 4.00 ಗಂಟೆಗೆ ಟೆಂಡರನ್ನು ತೆರೆಯಲಾಗುವುದು ಈ ಬಗ್ಗೆ ಮತ್ತೆ ಪ್ರತ್ಯೇಕವಾದ ಪ್ರಕಟಣೆ ಹೊರಡಿಸುವುದಿಲ್ಲ.
4. ಈ ಸದರಿ ಕಾಮಗಾರಿಗಳು ಕಾಲಬದ್ದ ಕೆಲಸಗಳಾಗಿದ್ದು, ಒಂದು ಪಕ್ಷ ಯಾವುದಾದರೂ ಕಾಮಗಾರಿಯನ್ನು ಟೆಂಡರ್ ಮುಂಚೆ ಕೈಗೊಂಡಿದ್ದ ಪಕ್ಷದಲ್ಲಿ ಮತ್ತು ಕೆಲವು ಕೆಲಸಗಳನ್ನು ಕೈಬಿಡಬೇಕಾದ ಸಂದರ್ಭದಲ್ಲಿ ಅಂತಹ ಕೆಲಸಗಳನ್ನು ಈ ಪ್ರಕಟಣೆಯ ಟೆಂಡರಿನಿಂದ ಹೊರತುಪಡಿಸಿ ಉಳಿದ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಟೆಂಡರ್‌ದಾರರಿಗೆ ಕಾಮಗಾರಿ ಕೈಗೊಳ್ಳಲು ಆದೇಶ ನೀಡಲಾಗುವುದು.
5. ಪ್ರತಿ ಟೆಂಡರ್ ದಾರರು ಈ ಕಾಮಗಾರಿಗಳನ್ನು ನೆರವೇರಿಸಲು ಅಗತ್ಯವಿರುವ ಸಲಕರಣೆಗಳನ್ನು ಹಾಗೂ ಸಾಗಾಣಿಕೆ ವ್ಯವಸ್ಥೆಯನ್ನು ಅವರೇ ಸ್ವಂತವಾಗಿ ಮಾಡಿಕೊಳ್ಳಬೇಕು.
6. ಈ ಮೇಲಿನ ಕೆಲಸಗಳಿಗೆ ಟೆಂಡರ್ ಸಲ್ಲಿಸಲು ಇಚ್ಚಿಸುವ ಗುತ್ತಿಗೆದಾರರು ಆಯಾ ಕೆಲಸಕ್ಕೆ ನಿಗದಿಪಡಿಸಿರುವ ಇಎಂಡಿ ಹಾಗೂ ಭದ್ರತಾ ಠೇವಣಿ ಮೊತ್ತಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ವಿಭಾಗ, ರಾಮನಗರ ಇವರ ಪರವಾಗಿ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದ ಡಿಡಿ ರೂಪದಲ್ಲಿ ಟೆಂಡರ್ ಜೊತೆಗೆ ಸಲ್ಲಿಸಬೇಕಾಗುತ್ತದೆ.
7. ಗುತ್ತಿಗೆದಾರರು ಷರತ್ತುಗಳನ್ನೊಳಗೊಂಡ ಟೆಂಡರ್‌ಗಳನ್ನು ಸಲ್ಲಿಸಿದಲ್ಲಿ ಅಂತಹವನ್ನು ತಿರಸ್ಕರಿಸಲಾಗುವುದು. ಇದರ ಬಗ್ಗೆ ಏನಾದರೂ ತಕರಾರುಗಳು ಉದ್ಭವವಾದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ರಾಮನಗರ ವಿಭಾಗ, ರಾಮನಗರರವರ ತೀರ್ಮಾನವೇ ಅಂತಿಮವಾಗಿರುತ್ತದೆ.
8. ನಿಗದಿಪಡಿಸಿದ ಅವಧಿಯ ನಂತರ ಬಂದ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.
9. ಯಾವುದೇ ಕಾರಣ ನೀಡದೆ ಟೆಂಡರ್‌ಗಳನ್ನು ಒಪ್ಪುವ ಹಾಗೂ ತಿರಸ್ಕರಿಸುವ ಹಕ್ಕನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ವಿಭಾಗ, ರಾಮನಗರ ರವರು ಕಾಯ್ದಿರಿಸಿಕೊಂಡಿರುತ್ತಾರೆ.
10. ಟೆಂಡರ್‌ನಲ್ಲಿ ಯಶಸ್ವಿಯಾದ ಅರಣ್ಯ ಗುತ್ತಿಗೆದಾರರಿಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ವಿಭಾಗ, ರಾಮನಗರ ಇವರಿಂದ ತಿಳುವಳಿಕೆ ನೀಡಿದ 7 ದಿವಸಗಳ ಒಳಗಾಗಿ ನಿರ್ಧಿಷ್ಟ ನಮೂನೆಯಲ್ಲಿ ಕರಾರು ನಾಮೆಯನ್ನು

